# ಚಿತ್ರದುರ್ಗ ಕೋಟೆಯ ಐತಿಹ್ಯಗಳು

(ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)


ಸಂಶೋಧಕ

ಬಸವರಾಜ ಸಿ.





ಡಾ. ಟಿ. ವಿಜಯ್ ಪೂಣಚ್ಚ

ಪ್ರಾಧ್ಯಾಪಕರು







ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ಚಿತ್ರದುರ್ಗ ಕೋಟೆಯ ಐತಿಹ್ಯಗಳು

(ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)

ಸಂಶೋಧಕ

ಬಸವರಾಜ ಸಿ.

ಮಾರ್ಗದರ್ಶಕರು

ಡಾ. ಟಿ. ವಿಜಯ್ ಪೂಣಚ್ಚ

ಪ್ರಾಧ್ಯಾಪಕರು









ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

## ಮಾರ್ಗದರ್ಶಕರ ದೃಢೀಕರಣ ಪತ್ರ

**ಚಿತ್ರದುರ್ಗ ಕೋಟೆಯ ಐತಿಹ್ಯಗಳು** ಎಂಬ ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ **ಬಸವರಾಜ ಸಿ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಟಿ. ವಿಜಯ್ ಪೂಣಚ್ಚ**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: ೧೯.೦೯.೧೦.

## ಸಂಶೋಧಕರ ಪ್ರಮಾಣ ಪತ್ರ

**ಚಿತ್ರದುರ್ಗ ಕೋಟೆಯ ಐತಿಹ್ಯಗಳು** ಎಂಬ ಈ ಪ್ರಬಂಧವನ್ನು **ಡಾ.ಟಿ.ವಿಜಯ್ ಪೂಣಚ್ಚ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, **ಎಂ.ಫಿಲ್** ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.


ಬಸವರಾಜ ಸಿ.
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬


ಸ್ಥಳ : ವಿದ್ಯಾರಣ್ಯ

ದಿನಾಂಕ: 15-09-2010

# ಪರಿವಿಡಿ

ಕರ್ನಾಟಕ ಚರಿತ್ರೆಯ ಬರವಣಿಗೆಯ ಸಂದರ್ಭದಲ್ಲಿ ರಾಜ್ಯಾಡಳಿತ ಸಂಸ್ಥಾನಗಳ ಚರಿತ್ರೆ ಮತ್ತು ವಸಾಹತುಕಾಲದ ಸಂಘರ್ಷಗಳ ಚರಿತ್ರೆ, ಮುಖ್ಯವಾದ ಸ್ಥಾನವನ್ನು ಪಡೆದುಕೊಂಡಿರುವುದನ್ನು ಗಮನಿಸಬಹುದು. ಇಂತಹ ಸಂದರ್ಭಗಳಲ್ಲಿ ಸ್ಥಳೀಯ ಮತ್ತು ಮೌಖಿಕ ಚರಿತ್ರೆಗಳು ಆಧುನಿಕ ಕರ್ನಾಟಕದ ಚರಿತ್ರೆ ಬರವಣಿಗೆಯಲ್ಲಿ ಮಹತ್ವವನ್ನು ಪಡೆದುಕೊಂಡಿಲ್ಲ. ಅಲ್ಲಲ್ಲಿ ರಾಜಮಹಾರಾಜರ, ಪಾಳೆಯಗಾರರ ಚರಿತ್ರೆಯನ್ನು ಬರೆಯುವ ಪ್ರಯತ್ನ ಮಾಡಿದರು. ಚಾರಿತ್ರಿಕ ಕುರುಹುಗಳ ಮೂಲಕ ಚರಿತ್ರೆಯ ವಿವಿಧ ಆಯಾಮಗಳನ್ನು ಅಭ್ಯಾಸ ಮಾಡಿರುವಂತದ್ದು ಬಹಳ ವಿರಳ. ಆಧುನಿಕ ಚಿತ್ರದುರ್ಗದ ಚರಿತ್ರೆಯ ಬಗ್ಗೆ ಅಧ್ಯಯನ ಮಾಡಿದ ಸಂದರ್ಭದಲ್ಲಿ ಬಹುತೇಕ ವಿದ್ವಾಂಸರು ಪಾಳೆಯಗಾರ ಮತ್ತು ಹೈದರನ ನಡುವಿನ ಸಂಘರ್ಷಗಳಲ್ಲಿ ಕೇಂದ್ರಬಿಂದುವಾಗಿ ತೆಗೆದುಕೊಂಡದ್ದನ್ನು ಗಮನಿಸಬಹುದಾಗಿದೆ. ಇದರೊಂದಿಗೆ ಅಲ್ಲಲ್ಲಿ ಮಠಮಾನ್ಯಗಳಲ್ಲಿ ಆಳರಸರುಗಳ ಬಗ್ಗೆ ಮೇಲ್ವರ್ಗದ ಅಥವಾ ಕೆಳವರ್ಗಗಳ ಸಮುದಾಯಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ಕಲೆಹಾಕಿರುವುದನ್ನು ಕಾಣಬಹುದು. ಪ್ರಸ್ತುತ ಅಧ್ಯಯನವು ಚಿತ್ರದುರ್ಗದ ಕಳಸದಂತಿರುವ ಕೋಟೆಯ ಬಗ್ಗೆ ತನ್ನ ಅಧ್ಯಯನವನ್ನು ಕೇಂದ್ರೀಕರಿಸಿದೆ.

ಸಾಂಪ್ರದಾಯಕವಾದ ಲಿಖಿತ ಆಧಾರಗಳಿಂದ ಚಿತ್ರದುರ್ಗದ ಏಳು ಸುತ್ತಿನ ಕೋಟೆಯ ಬಗ್ಗೆ ವರ್ಣರಂಜಿತ ಸಾಂಸ್ಕೃತಿಕ ಚರಿತ್ರೆಯನ್ನು ನಾವು ಗಮನಿಸಬಹುದು. ಇಂತಹ ಚರಿತ್ರೆಯಲ್ಲಿ ಪ್ರಬಲಧಾರೆ ರಾಷ್ಟ್ರೀಯವಾದಿ ಚರಿತ್ರೆ ಬರವಣಿಗೆಗಳ ಪ್ರಭಾವವಾಗಿರುವುದನ್ನು ನೋಡಬಹುದು. ಈ ಕಾರಣದಿಂದಲೇ ಚಿತ್ರದುರ್ಗದ ಕೋಟೆಯೆಂದರೆ ಪಾಳೆಯಗಾರರ ಇತಿಹಾಸ ಹೈದರ್ ಮದಕರಿನಾಯಕರ ಯುದ್ಧ, ಓಬವ್ವಳ ಪರಾಕ್ರಮ ಇತ್ಯಾದಿ ವಿಚಾರಗಳು ನಮ್ಮ ಕಣ್ಮುಂದೆ ನಿಲ್ಲುತ್ತವೆ.

ಪ್ರಸ್ತುತ ಅಧ್ಯಯನವು ಸಾಂಪ್ರದಾಯಿಕ ಚರಿತ್ರೆಯು ಚಿತ್ರದುರ್ಗದ ಕೋಟೆಯ ಬಗ್ಗೆ ನೀಡಿರುವ ಮಾಹಿತಿಗಳ ಘಟನೆಗಳನ್ನು, ವಿಶ್ಲೇಷಣೆಗಳನ್ನು ಅಭ್ಯಾಸ ಮಾಡುವ ಉದ್ದೇಶವನ್ನು ಹೊಂದಿದೆ. ನಿಬಂಧದುದ್ದಕ್ಕೂ ಈ ಬಗೆಯ ವಿಚಾರಗಳನ್ನು ಬಳಸಿಕೊಳ್ಳುವ ಪ್ರಯತ್ನಗಳನ್ನು ಮಾಡಲಾಗಿದೆ. ಇಂತಹ ಸಂದರ್ಭಗಳಲ್ಲಿ ಜನರ ಮನದಲ್ಲಿ, ನೆನಪುಗಳಲ್ಲಿ ಮಡುಗಟ್ಟಿ ನಿಂತ ವಿಚಾರಗಳನ್ನು ಇವುಗಳಿಗೆ ಸಂಬಂಧಪಟ್ಟ ಮೌಖಿಕ ಆಕರಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈಗಾಗಿ ಪ್ರಸ್ತುತ ನಿಬಂಧವು ಲಭ್ಯವಿರುವ ಐತಿಹ್ಯಗಳ ಮೂಲಕ ಚಿತ್ರದುರ್ಗದ ಕೋಟೆಯ ಸಾಂಸ್ಕೃತಿಕ ಆಯಾಮಗಳನ್ನು ಅಭ್ಯಸಿಸಲು ಯತ್ನಿಸುತ್ತದೆ. ಇದರೊಂದಿಗೆ ಚಿತ್ರದುರ್ಗದ ಸ್ಥಳೀಯ ಚರಿತ್ರೆಯ ಆಯಾಮವೊಂದನ್ನು ಮೌಖಿಕ ಆಕರಗಳ ಸಹಾಯದಿಂದ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗುವುದು. ಚಿತ್ರದುರ್ಗದ ಕೋಟೆ, ಕೋಟೆಯೊಳಗಿನ ದೇವಾಲಯ, ಬತೇರಿಗಳು, ನಾಯಕ ಅರಸರು, ಓನಕೆ ಓಬವ್ವ ಹೀಗೆ ಅನೇಕ ವಿಚಾರಗಳ ಬಗ್ಗೆ ಪ್ರಸ್ತುತ ನಿಬಂಧವು ಅಭ್ಯಸಿಸುವ ಉದ್ದೇಶವನ್ನೊಳಗೊಂಡಿದೆ.

ಮೇಲಿನ ಅಧ್ಯಯನಕ್ಕೆ ಪೂರಕವಾಗಿ ಚಿತ್ರದುರ್ಗದ ಸ್ಥಳನಾಮದ ಬಗ್ಗೆ ಹಾಗೂ ಐತಿಹ್ಯ ಹಿನ್ನೆಲೆಯ ಬಗ್ಗೆ ವಿವರಗಳನ್ನು ನೀಡುವ ಉದ್ದೇಶವಿದೆ.

ಚಿತ್ರದುರ್ಗದ ಪ್ರಾಚೀನ ನಾಮ ಕುರಿತು ಈ ಕೆಳಗಿನಂತೆ ಕೆಲವು ವಿಚಾರಗಳನ್ನು ಮಂಡಿಸಬಹುದಾಗಿದೆ.

ಮಹಾಭಾರತದ ಭೀಷ್ಮ ಪರ್ವದ ಒಂಬತ್ತನೆಯ ಅಧ್ಯಾಯದಲ್ಲಿ ದ್ರಾವಿಡ ಕೇರಳ ಮೊದಲಾದ ಹೆಸರುಗಳೊಂದಿಗೆ ಕರ್ನಾಟಕದ ಹೆಸರು ಉಲ್ಲೇಖಗೊಂಡಿದೆ. ಅನೇಕ ಶಾಸನಗಳಲ್ಲಿ ಕೂಟಶಾಸನವೆಂದು ಅನುಮಾನವಿರುವ ಕದಂಬ ದೊರೆ ವಿಷ್ಣುವರ್ಧನ ಬೀರರೂ ಶಾಸನದಲ್ಲಿ ಕರ್ನಾಟಕ ಎಂಬ ಹೆಸರಿನ ಪ್ರಪ್ರಥಮ ಉಲ್ಲೇಖವಿದೆ. ಇಂತಹ ಪ್ರಾಚೀನತೆ ಹಾಗೂ ಶಾಸನೋಕ್ತವಾದ ಕರ್ನಾಟಕದ ಮಧ್ಯಭಾಗದಲ್ಲಿ ಚಿತ್ರದುರ್ಗವು ಉತ್ತರ ಹಾಗೂ ದಕ್ಷಿಣ ಕರ್ನಾಟಕಗಳ ಸಂಸ್ಕೃತಿಯನ್ನು ಬೆಸೆಯುವ ಕೊಂಡಿಯಾಗಿದೆ. ೧೯೯೭ರ ಹಿಂದೆ ೯ ತಾಲ್ಲೂಕುಗಳನ್ನೊಳಗೊಂಡಿದ್ದು, ಈಗ ೬ ತಾಲ್ಲೂಕುಗಳನ್ನೊಂಡಿದೆ. ರಾಜ್ಯದಲ್ಲಿ ೯ನೇ ಸ್ಥಾನದಲ್ಲಿದ್ದು ಪೂರ್ವದಲ್ಲಿ ಆಂಧ್ರ, ಉತ್ತರದಲ್ಲಿ ಬಳ್ಳಾರಿ, ಪಶ್ಚಿಮದಲ್ಲಿ ದಾವಣಗೆರೆ ನೈರುತ್ಯದಲ್ಲಿ ಚಿಕ್ಕಮಗಳೂರು, ಆಗ್ನೇಯದಲ್ಲಿ ತುಮಕೂರು ಜಿಲ್ಲೆಗಳಿಂದ ಸುತ್ತುವರಿಯಲ್ಪಟ್ಟಿದೆ. ಚಿತ್ರದುರ್ಗವು ಬೆಟ್ಟಗುಡ್ಡಗಳಿಂದ ಆವೃತವಾಗಿದ್ದು, ಮುಖ್ಯವಾದ ಬೆಟ್ಟದ ಸಾಲುಗಳು ವಾಯುವ್ಯದಿಂದ ಆಗ್ನೇಯ ಕಡೆಗೆ ಒಂದೇ ಅಂತರದಲ್ಲಿ ಹಬ್ಬಿದೆ. ಈ ರೀತಿ ಸಾಗಿರುವ ಬೆಟ್ಟಗುಡ್ಡಗಳು ಸ್ವಾಭಾವಿಕವಾಗಿ ರಕ್ಷಣೆಯನ್ನೊದಗಿಸಿದೆ. ಪ್ರಕೃತಿಯೇ ಕೋಟೆಯಂತೆ ಮೈದೆಳೆದಿರುವ ಚಿತ್ರದುರ್ಗ ಬೆಟ್ಟಕ್ಕೆ ಚಿನ್ಮೂಲಾದ್ರಿ ಎಂದು ಕರೆಯಲಾಗಿದೆ.

(ಶಿವರುದ್ರಪ್ಪ ೧೯೮೭:೭೫ ; ತೆಲಗಾವಿ ೧೯೮೭:೫೭೪) ಚಿನ್ಮೂಲಾದ್ರಿ ಎಂದು ಕರೆಯಲಿಕ್ಕೆ ಎಂ.ಹೆಚ್.ಕೃಷ್ಣರವರ ೧೯೨೯ರ ಚಂದ್ರವಳ್ಳಿಯ ಭೂ ಸಂಶೋಧನೆಗಿಂತ ಮೊದಲು ಚಿತ್ರದುರ್ಗದ ಇತಿಹಾಸವನ್ನು ಕೆಳಕಂಡಂತೆ ಸ್ಥಳಪುರಾಣ ಹಾಗೂ ದಂತಕಥೆಗಳಿಂದ ವಿವರಿಸಲಾಗುತ್ತಿತ್ತು. ಇತಿಹಾಸವೊಂದರ ಪ್ರಕಾರ ತ್ರೇತಾಯುಗದಲ್ಲಿ ಒಮ್ಮೆ ಲಂಕಾಧಿಪನಾದ ರಾವಣನು ನಂದಿಕೇಶ್ವರನನ್ನು ವಂದಿಸದೆ ಅಲಕ್ಷಿಸಿ ಕೈಲಾಸಪರ್ವತವನ್ನು ಎತ್ತಲು ಮುನ್ನುಗ್ಗಿದಾಗ ನಂದಿ ಅಲ್ಲಿಂದ ಹಾರಿ ಬಂದು ಈ ಚಿತ್ರದುರ್ಗ ಬೆಟ್ಟದಲ್ಲಿ ಬಿದ್ದಾಗ ಜ್ಞಾನೋದಯವಾಗಿ ಇಲ್ಲಿಂದಲೇ ನಂದಿಕೇಶ್ವರನನ್ನು ಸ್ತುತಿಸುತ್ತ ಹೊರಟನಂತೆ. ಹೀಗೆ ರಾವಣನ ಚಿತ್ತ ಪರಿವರ್ತನೆಗೆ ಕಾರಣವಾಗಿ ಜ್ಞಾನವಿತ್ತ ಸ್ಥಳವಾದ್ದರಿಂದ ಈ ಬೆಟ್ಟಕ್ಕೆ ಚಿನ್ಮೂಲಾದ್ರಿ ಎಂಬ ಹೆಸರು ಬಂದಿತಂತೆ ತೆಲಗಾವಿಯವರು ಪ್ರಕಟಿಸಿದ ಚಿತ್ರದುರ್ಗದ ಸಂಕ್ಷಿಪ್ತ ಇತಿಹಾಸ, ಚಿತ್ರದುರ್ಗದ ಒನಕೆ ಓಬವ್ವೆಯ ಘಟನೆ, ಚಾರಿತ್ರಿಕ ಜಿಲ್ಲೆಗಳಲ್ಲಿರುವ ಕೋಟೆ–ಕೊತ್ತಲಗಳು, ಎಸ್.ವಿ. ಜೋಷಿಯವರ ಚಿತ್ರದುರ್ಗ ಜಿಲ್ಲೆಯಲ್ಲಿರುವ ಕೋಟೆ–ಕೊತ್ತಲಗಳು, ಎಸ್.ವಿ. ಗೌಡರ್‌ರವರ ಚಿತ್ರದುರ್ಗದ ದೇವ ಮಂದಿರಗಳು, ಬಿ.ಎಲ್. ವೇಣುರವರ ಚಿತ್ರದುರ್ಗದ ಪ್ರಮುಖ ಉತ್ಸವಗಳು ಮುಂತಾದವುಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

ಇಲ್ಲಿ ಸಂಶೋಧನೆಯ ಸಂದರ್ಭದಲ್ಲಿ ಸಂಗ್ರಹಿಸಿದ ಹಾಗೂ ಪರಿಶೀಲಿಸಿದ ಎಲ್ಲಾ ಸಾಕ್ಷ್ಯಾಧಾರಗಳನ್ನು ಗಮನಿಸಿದರೆ ಪಾಳೆಯಗಾರರ ಬಗ್ಗೆ ಚಿತ್ರದುರ್ಗ ಜಿಲ್ಲೆಯ ಸಂಪೂರ್ಣ ಅಧ್ಯಯನಗಳು ಮಾತ್ರ ನಡೆಸಿರುವುದು ತಿಳಿದುಬರುತ್ತದೆ. ಆದರೆ ನಿರ್ದಿಷ್ಟವಾಗಿ ಚಿತ್ರದುರ್ಗದ ಕೋಟೆಗಳ ಬಗ್ಗೆಯೇ ಹೆಚ್ಚಿನ ವಿವರಣೆಯನ್ನು ನೀಡಿಲ್ಲ. ಹಾಗಾಗಿ ಈ ಕ್ಷೇತ್ರದಲ್ಲಿ ಒಂದು ವ್ಯವಸ್ಥಿತವಾದ ಅಧ್ಯಯನ ಕೈಗೊಂಡು ಚಿತ್ರದುರ್ಗದ ಪಾಳೆಯಗಾರರು ಕೋಟೆಗಳ ರಚನೆಗೆ ನೀಡಿದ ಕೊಡುಗೆಯನ್ನು ಗುರುತಿಸುವುದೇ ಪ್ರಸ್ತುತ ಅಧ್ಯಯನದ ಪ್ರಮುಖವಾದ ಉದ್ದೇಶವಾಗಿದೆ. (ವೆಂಕಣಾಚಾರ್, ತೆಲಗಾವಿ ೧೯೭೭:೧೧೪)

ಈ ಪ್ರದೇಶದಲ್ಲಿ ಆದಿಹಳೆಶಿಲಾಯುಗದಿಂದ ನವಶಿಲಾಯುಗದವರೆಗೆ ಆದಿಮಾನವರು ಜೀವಿಸಿದ ಕುರುಹುಗಳಿವೆ. ಈ ಭಾಗವನ್ನು ಸೊಳ್ಳೆಲನಾಡು, ಚಿಣತಲದುರ್ಗ, ಛತ್ರಕಲ್ಲು, ಚಿಟ್ಸ್‌ದುರ್ಗ ಎಂಬ ಮುಂತಾದ ಹೆಸರುಗಳಿಂದ ಕರೆಯಲ್ಪಟ್ಟಿದೆ.

ಕೃಷ್ಣದೇವರಾಯನ ಕಾಲದಲ್ಲಿ ಚಿಮಟದುರ್ಗ ಎಂತಲೂ ಆಯಾಗಾರರ ವಿವರದಲ್ಲಿ ಚಿನ್ಮುಲಾಗಿರಿದುರ್ಗ, ಆಂಧ್ರ ಬೃತರ ಕಾಲದಲ್ಲಿ ಚಂದ್ರವಳ್ಳಿಯಂತಲೂ, ಟಿಪ್ಪುವಿನ ಕಾಲದಲ್ಲಿ ಫರ್ರಕಬಾದ್ ಎಂದು ಬ್ರಿಟಿಷರ ಅವಧಿಯಲ್ಲಿ ಚಿಟ್ಟಲುಡ್ರುಗ್ ಎಂದು ಕರೆಸಿಕೊಂಡು ಪ್ರಸ್ತುತ ಶಾಶ್ವತವಾಗಿ ಚಿತ್ರದುರ್ಗ ಎಂದು ಕರೆಯಲಾಗುತ್ತಿದೆ.

ಲಿಖಿತ ಆಕರಗಳ ಪೈಕಿ ಮೊತ್ತಮೊದಲ ದಾಖಲೆಗಳಾಗಿ ಶಾಸನಗಳು ಉಳಿದುಬಂದಿದ್ದು, ಚಿತ್ರದುರ್ಗದ ಪ್ರಾಚೀನ ಹೆಸರು 'ಬೆಂಮ್ಮರು' ಹಾಗೂ ಬೆಂಮಚನೂರು, ಎಂಬ ಉಲ್ಲೇಖಗಳನ್ನು ಹೊಂದಿರುವ ಶಾಸನಗಳ ಕಾಲ ಹನ್ನೊಂದನೇ ಶತಮಾನಕ್ಕೂ ಪೂರ್ವದಲ್ಲಿ ಸೂಳ್ಗಲ್ಲು ಎಂಬುದರ ವಿನಃ ಚಿತ್ರದುರ್ಗ ಬೆಟ್ಟ ಮತ್ತು ಪರಿಸರಕ್ಕೆ ಇದ್ದ ಹೆಸರು ಕುರಿತು ಅಧಿಕೃತ ದಾಖಲೆಗಳಿಲ್ಲ. ಸೂಳ್ಗಲ್ಲು ಎಂಬುದು ಸಹ ಈಗಿನ ಚಿತ್ರದುರ್ಗದ ಬೆಟ್ಟ ಪರಿಸರದ ಭಾಗವೊಂದಕ್ಕೆ ಇದ್ದ ಹೆಸರೆಂದು ಈಗಾಗಲೇ ದೃಢಪಟ್ಟಿದೆ. ಈ ದೃಷ್ಟಿಯಿಂದ ಬೆಂಮತ್ತೂರು ಅಥವಾ ಬೆಂಮಚನೂರು ಎಂಬುದು ಶಾಸನದಲ್ಲಿ ಉಲ್ಲೇಖಗೊಳ್ಳುವ ಪೂರ್ವದಲ್ಲೇ ಈ ಹೆಸರಿನ ಆಡುರೂಪಗಳು ಪ್ರಚಲಿತವಿದ್ದಿರುವ ಸಾಧ್ಯತೆಯೇ ಇಲ್ಲದಿಲ್ಲ ಎಂಬುದಾಗಿ ಹೇಳಬಹುದಾಗಿದೆ.

ಈ ಪರಿಸರವು ತನ್ನದೇ ಆದ ಐತಿಹಾಸಿಕ ಮಹತ್ವವನ್ನೊಂದಿದೆ. ನವಶಿಲಾಯುಗದಿಂದಲೂ ಇಲ್ಲಿ ಜನವಸತಿಯಿದ್ದಿತೆಂದು ತಿಳಿದುಬರುತ್ತದೆ. ಜೊತೆಗೆ ಇದರ ಸುತ್ತಮುತ್ತಲೂ ಬೃಹತ್ ಶಿಲಾ ಸಮಾಧಿಗಳು ದೊರಕಿದ್ದು, ಕಬ್ಬಿಣ ಯುಗದ ಸಂಸ್ಕೃತಿ ಇದ್ದಿತ್ತೆಂಬುದು ನಮಗೆ ತಿಳಿದುಬರುತ್ತದೆ.

ಈ ಹಿನ್ನೆಲೆಯಲ್ಲಿ ಲಾಗಾಯ್ತಿನಿಂದಲೂ ಜನಪದರು ಚಿತ್ರದುರ್ಗ ಬೆಟ್ಟ ಪರಿಸರವನ್ನು ಚಿನ್ನದದುರ್ಗವೆಂತಲೇ ಕರೆಯುತ್ತಾ ಬಂದಿರುವುದು ಗಮನಾರ್ಹವಾಗಿದೆ.

ಉದಾ: ಚಿತ್ತರದ ಕಲ್ಲು ಎಂಬೋದು ಚಿನ್ನದಕೋಟೆ, ಚಿನ್ನ ಮುರಿದಾರೆ, ಚಿನ್ನಚಿಗರೋದು ಎಂಬುದು ಚಿನ್ನ ಮುರಿದರೆ, ಚಿತ್ತರಕಲ್ಲು ಎಂಬ ಅರ್ಥವನ್ನೊಳಗೊಂಡಿದೆ. ಒಟ್ಟಿನಲ್ಲಿ ಬಂಗಾರ ಸೇರಿರುವ ಬೆಣಚಿನ ಸಿರಗಳು ಚಿತ್ರದುರ್ಗ ಪರಿಸರದಲ್ಲೂ ಕಂಡುಬಂದಿರುವುದು ಗಮನಾರ್ಹವಾದುದ್ದಾಗಿದೆ. ಹಾಗೂ ಪುರಾತತ್ವಿಯ ಸಂಶೋಧನೆಗಳು ಚಿತ್ರದುರ್ಗದ ಪ್ರಾಚೀನ ನಾಮದ ಬಗೆಗೆ ನೀಡುವ ಸುಳಿವನ್ನು ಇಲ್ಲಿ ಪರಿಶೀಲಿಸಬಹುದಾಗಿದೆ. ಚರಿತ್ರಪೂರ್ವ ಎಡೆಗಳನ್ನು ಜನಸಾಮಾನ್ಯರು ಸಾಮಾನ್ಯವಾಗಿ ದೆವ್ವ, ರಾಕ್ಷಸ, ಭೂತ, ಬೇತಾಳಗಳು ವಾಸಿಸುವ ಸ್ಥಾನಗಳೆಂಬುದಾಗಿ ಗುರುತಿಸುವುದುಂಟು. ವಾಸ್ತವ್ಯದಲ್ಲಿ ಇವು ಪುರಾತತ್ವ ನಿವೇಶನ ಸಂಬಂಧಿ ಎಡೆಗಳೆನ್ನುವುದು ಗಮನಾರ್ಹ. ಚಿತ್ರದುರ್ಗ ಬೆಟ್ಟ ಮತ್ತು ಪರಿಸರದಲ್ಲಿ ನೆಲೆಗೊಂಡಿರುವ ಇಂಥಾ ಎರಡು ಎಡೆಗಳನ್ನು ಇಲ್ಲಿ ಉದಾಹರಿಸುವುದರೊಡನೆ ಮೇಲಿನ ಅಂಶವನ್ನು ದೃಢೀಕರಿಸಬಹುದಾಗಿದೆ.

ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗರಾಮೇಶ್ವರದಲ್ಲಿ ದೊರೆತ ಶಿಲಾಶಾಸನಗಳಿಂದ ಅಶೋಕನ ಆಡಳಿತ ಮೌರ್ಯ ಸಾಮ್ರಾಜ್ಯದ ಆಳ್ವಿಕೆಯ ಬಗ್ಗೆ ತಿಳಿಸುತ್ತದೆ. ಚಂದ್ರವಳ್ಳಿಯ ಉತ್ಖನನದಿಂದ ಶಾತವಾಹನರ ಆಳ್ವಿಕೆ ನಂತರ ಬನವಾಸಿಯ ಕದಂಬರೂ, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರಿಗೂ ಈ ಪರಿಸರ ಆಡಳಿತಕ್ಕೆ ಒಳಪಟ್ಟಿದ್ದಿತು. ಮುಂದೆ ನೊಳಂಬರ ಆಳ್ವಿಕೆ

ಆರಂಭವಾಗಿ ನೊಳಂಬವಾಡಿ ಮುವತ್ತೆರಡು ಸಾವಿರ ರಾಜ್ಯ ಎಂದಾಯಿತು. ಹತ್ತನೆಯ ಶತಮಾನದಲ್ಲಿ ಮತ್ತೆ ಚಾಲುಕ್ಯರ ವಶಕ್ಕೆ ಸೇರಿ ನಂತರ ಹೊಯ್ಸಳರ ಆಳ್ವಿಕೆ ಆರಂಭವಾಯಿತು. ಪಾಂಡ್ಯರು ಈ ಜಿಲ್ಲೆಯನ್ನು ಆಳಿದರು. ಆದ್ದರಿಂದ ಈ ಭಾಗಕ್ಕೆ 'ಪಾಂಡವರಾಜ್ಯ', 'ಪಾಂಡವ ಮಂಡಲ' ಎಂದು ಹೆಸರಾಗಿತ್ತು. ಚಿತ್ರದುರ್ಗದ ಪೂರ್ವ ಭಾಗದಲ್ಲಿ ಚೋಳರು, ವಾಯುವ್ಯಕ್ಕೆ ದೇವಗಿರಿಯ ಯಾದವರು ಆಳ್ವಿಕೆ ನಡೆಸಿದರು. ಹದಿನೈದನೆಯ ಶತಮಾನದಲ್ಲಿ ಈ ದುರ್ಗವು ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು. ಅದೇ ಸಮಯದಲ್ಲಿ ಅಲ್ಲಲ್ಲಿ ಪಾಳೆಯಗಾರರು ಕೂಡಿ ಆಳ್ವಿಕೆ ಮಾಡತೊಡಗಿದರು. ಇವರಲ್ಲಿ ಚಿತ್ರದುರ್ಗದ ನಿಡಗಲ್ಲು ಹಟ್ಟಿ, ಪಾಳೆಯಗಾರರು ಮುಖ್ಯರಾದವರು ಕ್ರಿ.ಶ. ೧೫೬೪ರಲ್ಲಿ ವಿಜಯನಗರದ ಪತನ ನಂತರ ಪಾಳೆಯಗಾರರು ಸ್ವತಂತ್ರರಾದರು ೧೭೭೯ರಲ್ಲಿ ಇದು ಪತನವಾಗಿ ಹೈದರ್, ಟಿಪ್ಪುವಿನ ವಶಕ್ಕೆ ಬಂದು ನಂತರ ಬ್ರಿಟಿಷರ ಆಳ್ವಿಕೆಗೆ ಹೋಯಿತು. ಮೈಸೂರು ಸಂಸ್ಥಾನವು ಬ್ರಿಟಿಷ್ ಕಮೀಷನ್‌ರ್‌ಗೆ ಸೇರಿತು. ನಂತರ ೧೮೮೬ರಲ್ಲಿ ಚಿತ್ರದುರ್ಗವು ಒಂದು ಸ್ವತಂತ್ರವಾಗಿ ಮಾರ್ಪಾಡಾಯಿತು.

ವಿಜಯನಗರ ಸಾಮ್ರಾಜ್ಯದ ಪತನಾನಂತರ ಜಿಲ್ಲೆಯಲ್ಲಿ ಅನೇಕ ಪಾಳೇಯಪಟ್ಟಗಳು ತಲೆ ಎತ್ತಿದವು. ಇಂತಹವರಲ್ಲಿ ಚಿತ್ರದುರ್ಗದ ಪಾಳೆಯಗಾರರು ಪ್ರಮುಖರು. ಚಿತ್ರದುರ್ಗದ ಚರಿತ್ರೆಯನ್ನು ಮುಖ್ಯವಾಗಿ ಕೋಟೆ ಮತ್ತು ಪಾಳೆಯಗಾರರ ಚರಿತ್ರೆಯನ್ನು ಕೇಂದ್ರವಾಗಿಟ್ಟುಕೊಂಡು ಅಭ್ಯಾಸಿಸಲಾಗಿದೆ. ಅವುಗಳಲ್ಲಿ ೧೯೫೭ರಲ್ಲಿ "ಚಿತ್ರದುರ್ಗದ ಬೆಟ್ಟ ಮತ್ತು ನಾಯಕ ಸಾಮ್ರಾಜ್ಯ" ಎಂಬ ಶೀರ್ಷಿಕೆಯಲ್ಲಿ ಚಿತ್ರದುರ್ಗದ ಸ್ಮಾರಕಗಳು ಮತ್ತು ಇತಿಹಾಸ ಕುರಿತು ಅಧ್ಯಯನ ಮುಖ್ಯವಾದುದು. ಇದರ ಮುಳಕ ಹುಲ್ಲೂರು ಶ್ರೀನಿವಾಸ ಜೋಯಿಸರು (೧೯೬೮) ನಾಯಕ ಅರಸರ ವಂಶಾವಳಿ ಪಟ್ಟಿಯನ್ನು ಪರಿಚಯಿಸಿದರು.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ಶೀರ್ಷಿಕೆಯನ್ವಯ ಚಿತ್ರದುರ್ಗಕ್ಕೆ ಮಾತ್ರ ಸೀಮಿತವಾಗಿದೆ. ಅಂದರೆ ವಿಷಯದ ವ್ಯಾಪ್ತಿಯ ಪ್ರಧಾನವಾಗಿ ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡ ಕೋಟೆಗಳು, ದೇವಾಲಯಗಳ ಮೂರ್ತಿಶಿಲ್ಪಗಳು, ಚಿತ್ರಕಲೆ, ಬುರುಜುಗಳು, ಕಣಜಗಳು, ಮದ್ದಿನ ಮನೆಗಳು, ಅರಮನೆಗಳು ಮುಂತಾದ ವಿಷಯಗಳನ್ನು ಪ್ರಸ್ತುತ ನಿಬಂಧವು ಹೊಂದಿದೆ.

ಎಮ್.ಎಸ್. ಪುಟ್ಟಣ್ಣನವರ 'ಚಿತ್ರದುರ್ಗ ಪಾಳೆಯಗಾರರು' (೧೯೨೪) ಕ್ರಿ.ಶ. ೧೯೨೮ರಲ್ಲಿ ದಿ ಮದರಾಸ್ ವೇಲ್ ಅನ್ಯೂಯತನಲ್ಲಿ ಪ್ರಕಟಗೊಂಡ ಎ.ಆರ್.ಸ್ಲೇಟರ್‌ರವರ 'ದಿ ಹಿಲ್‌ಪೋರ್ಟ್ ಆಫ್ ಮೈಸೂರು', ಜಿ.ಎಲ್.ಸ್ವಾಮಿಯವರ 'ಚಿತ್ರದುರ್ಗ ಡಿಸ್ಟ್ರಿಕ್ಟ್ ಕೈಪಿಡಿ', ಬಿ. ರಾಮರಾವ್‌ರವರ 'ರಿಕಲೆಕ್ಷನ್ಸ್ ಆಫ್ ಆ್ಯನ್ ಇಂಡಿಯನ್ ಜಿಯಾಲಿಜಿಸ್ಟ್' ಎಂಬ ಆತ್ಮಚರಿತ್ರೆ ಚಿತ್ರದುರ್ಗದ ಕೋಟೆ ಮತ್ತು ಪರಿಸರದ ಬಗ್ಗೆ ಮಾಹಿತಿಗಳನ್ನು ನೀಡುತ್ತವೆ. ಕಮಲಾಹಂಪನಾರವರ 'ವೀರವನಿತೆ

ಓಬವ್ವ' (೨೦೦೦), ವೆಂಕಣ್ಣಾಚಾರ್, ಹುಲ್ಲೂರು ಶ್ರೀನಿವಾಸ ಜೋಯಿಸ ಹಾಗೂ ತೆಲಗಾವಿಯವರು ಸಂಪಾದಿಸಿದ 'ಐತಿಹಾಸಿಕ ಚಿತ್ರದುರ್ಗ' (೧೯೭೬) ಮತ್ತು 'ಚಿತ್ರದುರ್ಗ ದರ್ಶಿನಿ' (೧೯೮೦) ನಾಯಕರ ಚರಿತ್ರೆಯನ್ನು ತಿಳಿಸುವಲ್ಲಿ ಪ್ರಮುಖವಾದವುಗಳಾಗಿವೆ. ಜೊತೆಗೆ ಗಿರಿಜಾರವರ 'ಚಿತ್ರದುರ್ಗ ಜಿಲ್ಲಾ ದರ್ಶಿನಿ' (೧೯೯೧) ಸಹ ಪ್ರಮುಖವಾದ್ದುದಾಗಿದೆ. ಹುಲ್ಲೂರು ಶ್ರೀನಿವಾಸ ಪಾಂಡುರಂಗ ಜೋಯಿಸರ 'ಏಳು ಸುತ್ತಿನಕೋಟೆ' (೧೯೮೮), ಖ್ಯಾತ ಸಾಹಿತಿಗಳಾದ ತ.ರಾ.ಸು ಮತ್ತು ಹೆಚ್. ಶ್ರೀಶೈಲ ಆರಾಧ್ಯ ಅವರು ಸಂಯೋಜಿಸಿದ 'ಚಿತ್ರಮಯ ಚಿತ್ರದುರ್ಗ' (೧೯೮೨) ಕಮಲಾ ಹಂಪನರವರ 'ಚಿಕ್ಕವರಿಗೆ ಚಿತ್ರದುರ್ಗ', ಸಿ. ಆಂಜನೇಯವರವರ 'ಚಿತ್ರದುರ್ಗದ ರಾಜ ಮನೆತನದ ವಂಶಾವಳಿ' (೧೯೮೯), ತೆಲಗಾವಿಯವರ '೭೭ ಪಾಳೆಯಗಾರರು' (೨೦೧೦) ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಗ್ರಂಥಗಳು, ಎಂ.ಎಸ್.ತಿಪ್ಪೇಸ್ವಾಮಿಯವರ ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ (೨೦೦೪). ಎಂಬ ದಾಖಲೆಗಳನ್ನು ಬಳಸಿಕೊಳ್ಳಲಾಗಿದೆ.

ಇತಿಹಾಸದಷ್ಟೆ ಜನಸಾಮಾನ್ಯರಲ್ಲಿ ಬೇರೂರಿರುವ ಐತಿಹ್ಯಗಳಿಗೂ ಪ್ರಮುಖ ಸ್ಥಾನವಿದೆ. ಮಾನವನ ನಂಬಿಕೆ, ಆಚರಣೆ, ವ್ಯವಹಾರಗಳೊಂದಿಗೆ ಇವು ಸೇರಿಹೋಗಿದ್ದು, ಅವುಗಳಿಗೆ ನಮ್ಮ ಪೂರ್ವಿಕರು ನೀಡಿದ್ದ ಮಹತ್ವವನ್ನು ನಾವಿಲ್ಲಿ ಗಮನಿಸಬಹುದು. ಮಂಜುನಾಥರಾವ್ ಹೇಳುವಂತೆ- ಒಂದು ಕಾಲದಲ್ಲಿ ಪ್ರಜೋಪಕಾರಿಯಾದ ಯಾವುದೇ ಸಾಧನೆಯನ್ನು ಯಾವುದೇ ವ್ಯಕ್ತಿ ಮಾಡಿದಾಗ ಅವನು ಜನಸಾಮಾನ್ಯರ ದೃಷ್ಟಿಯಲ್ಲಿ ಮಹನೀಯನಾಗುತ್ತಿದ್ದ. ಸಮಾಜದಲ್ಲಿ ಅವನ ಗೌರವಾದರಗಳು ನೂರ್ಮಡಿಸುತ್ತಿದ್ದವು. ಕೆಲವು ಸಂದರ್ಭಗಳಲ್ಲಿ ಅಂತಹ ಮಹತ್ವ ಪಡೆಯಲು ಯಾರಾದರೂ ಯಾವುದೇ ಸಾಹಸಕಾರ್ಯ, ಸಾಧನೆಗಳಿಗೆ ಪ್ರಯತ್ನಿಸಬಹುದಿತ್ತು. ಅಲ್ಲದೇ ಜನರು ತಮ್ಮ ಸುತ್ತಮುತ್ತಲು ನಡೆಯುತ್ತಿದ್ದ ಎಲ್ಲ ಬಗೆಯ ಬದಲಾವಣೆಗಳನ್ನು ಗಮನಿಸುತ್ತಿದ್ದು, ತಮ್ಮ ಮುಗ್ಧ ಸ್ವಭಾವಕ್ಕನುಗುಣವಾಗಿ ಅವುಗಳಿಗೆ ಅರ್ಥ ಕಲ್ಪಿಸುತ್ತಲೂ, ವಿವರಣೆ ನೀಡುತ್ತಲೂ ಹೋಗುತ್ತಿದ್ದರು. ಬಾಯಿಂದ ಬಾಯಿಗೆ ಹರಡುವಾಗ ಅಂಥ ಸಂದರ್ಭಗಳು ಹಾಗೂ ಸಂಗತಿಗಳು ಮಾರ್ಪಾಟು ಹೊಂದತ್ತಲೂ, ವಿಶೇಷ ಮಹತ್ವವನ್ನು ರೂಪಿಸುತ್ತಲೂ ಬೆಳೆಯುತ್ತಿದ್ದವು. ಮಾನವ ಬುದ್ದಿವಂತನಾಗಿ ಸುಧಾರಿಸಿದಂತೆ, ವೈಜ್ಞಾನಿಕ ವಿಚಾರಗಳನ್ನು ಅರಿಯಲು ಪ್ರಯತ್ನಿಸಿದಂತೆ, ಜಗತ್ತಿನ ಮತ್ತು ಬದುಕಿನ ಮೂಲಭೂತ ಸಮಸ್ಯೆ ಹಾಗೂ ಸಂಗತಿಗಳನ್ನು ಕುರಿತು ಚಿಂತನೆ ನಡೆಸಿದಂತೆ ಅವನ ಧೋರಣೆ, ನಂಬಿಕೆ, ದೃಷ್ಟಿಕೋನಗಳೂ ಬದಲಾಗುತ್ತಾ ನಡೆದವು. ಕಾಲಕ್ರಮದಲ್ಲಿ ಹಿಂದೆ ಅವನ ಪೂರ್ವಿಕರು ಅಥವಾ ಅವನು ನಂಬಿದ ಕೆಲವು ವಿಷಯಗಳು ಅವನಿಗೆ ಅಸಂಗತವಾಗಿ ಅಸತ್ಯವಾಗಿ ಹಾಗೂ ಕೆಲವೊಮ್ಮೆ ಸಾಂಕೇತಿಕವಾಗಿ ತೋರಿಬಂದವು. ಇಂದು ಚಿತ್ರದುರ್ಗ ಇತಿಹಾಸದಲ್ಲಿ ಬೆರೆತುಹೋಗಿರುವ, ಅನೂಚಾನವಾಗಿ ಅದರೊಡನೆ ಬಂದಿರುವ ಐತಿಹ್ಯಗಳೂ ಸಹ ಇಂತಹ ಸತ್ಯವನ್ನು ನಮಗೆ

ಮನದಟ್ಟು ಮಾಡಿಕೊಡುತ್ತವೆ. ಅವು ಸಾಂಕೇತಿಕವಾಗಿ ನಮ್ಮ ಪೂರ್ವಿಕರ ನಂಬಿಕೆ ಹಾಗೂ ಚಿಂತನಾಶೀಲ ಸ್ವಭಾವಗಳನ್ನು ನಮಗೆ ಪರಿಚಯಿಸುತ್ತವೆ.

ನಮ್ಮ ಸುತ್ತಲೂ ಇರುವ ಐತಿಹ್ಯಗಳು ಸಮಾಜದ ಹಲವು ನಂಬಿಕೆಗಳನ್ನು ಪ್ರತಿಬಿಂಬಿಸುತ್ತವೆ. ಐತಿಹ್ಯ ಅಥವಾ ದಂತಕಥೆಯು ಯಾವುದೇ ಸಂದರ್ಭವೊಂದನ್ನು ಸಮರ್ಥಿಸಿಕೊಳ್ಳಲು, ಅಜ್ಞಾನವನ್ನು ಮುಚ್ಚಲು, ಭ್ರಾಂತಿಯನ್ನು ತೊಡೆದುಹಾಕಲು, ಅಥವಾ ಪರಂಪರೆಯನ್ನು ಉಳಿಸಿಕೊಂಡು ಬರಲು ಸೃಷ್ಟಿಯಾಗಿದ್ದಿರಬಹುದು. ಕೆಲವೊಮ್ಮೆ ಸ್ವಾರ್ಥ ಸಾಧನೆಗಾಗಿ ಯಾರೋ ಹುಟ್ಟಿಸಿದ ಕಥೆಯಾಗಿರಲೂಬಹುದು. ಆದರೆ ಅವು ಜನರ ಅಭಿರುಚಿ ಮತ್ತು ರೀತಿ ಪ್ರವೃತ್ತಿಯನ್ನು ಸೂಚಿಸುವ ಸಂದರ್ಭಗಳಾಗಿ ಉಳಿದಿವೆಯೆಂದೂ ನಂಬಬಹುದಾಗಿದೆ. (ಮಂಜುನಾಥರಾವ್ ೧೯೭೭:೭೪)

ಎಂ. ಚಿದಾನಂದಮೂರ್ತಿಯವರು ಹೇಳುವಂತೆ, "........... ದಂತಕಥೆಯು ಸಂಪೂರ್ಣವಾಗಿ ಕಲ್ಪಿತವಾಗಿದ್ದು, ಇತಿಹಾಸಕ್ಕೆ ವಿರೋಧವಾಗಿರಬೇಕಾದ್ದೇನೂ ಇಲ್ಲ. ಕೆಲವು ಸಾರಿ ವಾಸ್ತವ ಸಂಗತಿಯೊಂದು ಜನಗಳ ಕಲ್ಪನೆಯಲ್ಲಿ ರೆಕ್ಕೆ ಪುಕ್ಕ ಬಣ್ಣಗಳನ್ನು ತಳೆದುಕೊಂಡು ಅದ್ಭುತ ಸಂಗತಿಯಾಗಿ ಪರಿಣಮಿಸಬಹುದು. ...........ದಂತಕಥೆಗಳಲ್ಲಿ ಕೆಲವು ಪೂರ್ತಿ ಕಲ್ಪಿತಗಳಿರಬಹುದು ಅಥವಾ ವೇಷವನ್ನು ತೊಟ್ಟ ಇತಿಹಾಸವಿರಬಹುದು." ಇದು ಐತಿಹ್ಯಕ್ಕೂ ಅನ್ವಯಿಸುತ್ತದೆ.

ಇದರಲ್ಲಿ ಮುಖ್ಯವಾಗಿ ಚಿತ್ರದುರ್ಗದ ಕೋಟೆಗಳ ಐತಿಹ್ಯಗಳ ಕುರಿತಂತೆ ಸಂಶೋಧನೆಗಳಿಗೆ ಅನುವುಮಾಡಿಕೊಡುವ ಸ್ವರೂಪವನ್ನು ಹೊಂದಿದೆ.

**ಟಿಪ್ಪಣಿಗಳು:**

೧. ಚಿತ್ರದುರ್ಗದ ಬಗ್ಗೆ ಮೊಟ್ಟಮೊದಲು ಅಧ್ಯಯನಿಸಿದವರು ಬ್ರಿಟಿಷ್ ಇಂಜಿನಿಯರೊಬ್ಬರು ಈ ಪ್ರದೇಶದಲ್ಲಿ ನೀರು ಸರಳವಾಗಿ ಹರಿದು ಹೋಗಲೆಂದು ಕಾಲುವೆ ತೋಡಿಸಿದಾಗ ಕೆಲವು ಸೀಸದ ನಾಣ್ಯಗಳು ದೊರೆತು ಅವುಗಳನ್ನು ಪರೀಕ್ಷಿಸಿದ ಲಂಡನ್ ಮ್ಯೂಜಿಯನ್ ರ್‍ಯಾಪ್ಸನ್ ಇ.ಜೆ.ರವರು ಈ ನಾಣ್ಯಗಳು ಆಂಧ್ರಭೃತ್ಯರ ನಾಣ್ಯಗಳೆಂದು ಅಭಿಪ್ರಾಯಪಟ್ಟರು.

೨. ರೈಸ್ ಬಿ.ಎಲ್. ಇವರು ಹಲವಾರು ಶಾಸನಗಳನ್ನು ಪ್ರಕಟಿಸಿದ್ದರು ಇವರೊಂದಿಗೆ ನರಸಿಂಹಚಾರ್, ಶ್ಯಾಮಶಾಸ್ತ್ರಿಗಳು ಅಧ್ಯಯನ ನಡೆಸಿದ್ದರು. ೧೯೦೮ರಲ್ಲಿ ರೈಸ್‌ಗೆ ಇಲ್ಲಿ ದೊರೆತ ಅಗಸ್ಟಸ್ ಚಕ್ರವರ್ತಿಯ ಕಾಲದ ರೋಮನ್ ಡೊನೇರಿಯಸ್‌ನ ಬೆಳ್ಳಿನಾಣ್ಯ, ಆಂಧ್ರರಾಜ ಪ್ರತಿನಿಧಿಗಳ ಮುಡಾನಂದ, ಚುಟುಕುನಂದರಿಗೆ ಸೇರಿದ ತವರದ ನಾಣ್ಯಗಳು ಇವುಗಳಿಂದ ಈ ಪ್ರದೇಶದ ಪ್ರಾಚೀನತೆಯ ಬಗ್ಗೆ ಅಧ್ಯಯನಿಸಲು ಸಾಧ್ಯವಾಯಿತು.

೩. ಕೃಷ್ಣ ಎಂ.ಹೆಚ್. ೧೯೨೮ರಲ್ಲಿ ಈ ಸ್ಥಳದಲ್ಲಿ ಸಂಶೋಧನೆ ನಡೆಸಿದಾಗ ಸುಮಾರು ಭೂಮಿಯ ಏಳು ಪದರಗಳನ್ನು ಪರೀಕ್ಷಿಸಲಾಯಿತು. ಇದರಿಂದ ಶಾತವಾಹನರ ಆಳ್ವಿಕೆಯಲ್ಲಿ ರೋಮ್ ಚೀನಾದೊಡನೆ ವ್ಯಾಪಾರ ನಡೆಸುತ್ತಿದ್ದ ಕೈಗಾರಿಕಾ ಸ್ಥಳವಾಗಿದ್ದಿತು (ಗಿರಿಜ ೧೯೯೧:೯–೧೦, ೫೨–೫೩).

೪. ಐತಿಹ್ಯಗಳು ಸಮಾಜದ ಹಲವು ನಂಬಿಕೆಗಳನ್ನು ಪ್ರತಿಬಿಂಬಿಸುತ್ತವೆ. ಐತಿಹ್ಯ/ದಂತಕಥೆಯು ಯಾವುದೇ ಸಂದರ್ಭವೊಂದನ್ನು ಸಮರ್ಥಿಸಿಕೊಳ್ಳಲು, ಅಜ್ಞಾನವನ್ನು ಮುಚ್ಚಲು, ಭ್ರಾಂತಿಯನ್ನು ತೊಡೆದುಹಾಕಲು ಅಥವಾ ಪರಂಪರೆಯನ್ನು ಉಳಿಸಿಕೊಂಡು ಬರಲು ಸೃಷ್ಟಿಯಾಗಿದ್ದಿರಬಹುದು. ಇಲ್ಲಿ ಸ್ಥಳೀಯ ಇತಿಹಾಸ ಚರಿತ್ರೆಕಾರನಿಗೆ ಮುಖ್ಯವೆನಿಸುವ ದಾಖಲೆಗಳನ್ನು ಒದಗಿಸಿಕೊಟ್ಟು ಆ ನಾಡಿನ ಇತಿಹಾಸ ರಚನೆಗೆ ಒಂದು ಚೌಕಟ್ಟನ್ನು ಸೃಷ್ಟಿಸಿಕೊಟ್ಟಂತಾಯಿತು. ಆದ್ದರಿಂದ ಇತ್ತೀಚೆಗೆ ಕರ್ನಾಟಕದ ಅನೇಕ ಐತಿಹಾಸಿಕ ಸ್ಥಳಗಳು ಬೆಳಕಿಗೆ ಬರುತ್ತಿವೆ. ಇದರಿಂದ ಸ್ಥಳೀಯ ಇತಿಹಾಸವು ಐತಿಹ್ಯಗಳ ಪತ್ತೆಗೆ ಹೆಚ್ಚಿನದಾಗಿ ಸಹಕಾರಿಯಾಗುತ್ತಿದೆ. ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಸ್ಥಳದ ಐತಿಹ್ಯವೊಂದು ಚಿತ್ತರದ ಕಲ್ಲು, ಈ ಚಿತ್ತರದ ಕಲ್ಲು ಎಂಬೋದು ಚಿನ್ನದ ಕೋಟೆ, ಚಿನ್ನ ಮುರಿದಾರೆ ಚಿನ್ನ ಚಿಗರೋದು ಎಂಬುದು ಚಿನ್ನ ಮುರಿದಾರೆ ಚಿತ್ತರದ ಕಲ್ಲು ಎಂಬ ಅರ್ಥವನ್ನು ಸೂಚಿಸುತ್ತದೆ. ಈಗ ಹಲವು ನಾಮವಳಿಗಳನ್ನು ಹೊಂದಿರುವ ಈ ದುರ್ಗವು ಬಂಗಾರ ಸೇರಿರುವ ಬೆಣಚಿನ ಸಿರಗಳು ಚಿತ್ರದುರ್ಗದ ಪ್ರಾಚೀನ ನಾಮದ ಬಗೆಗೆ ನೀಡುವ ಸುಳಿವನ್ನು ಇಲ್ಲಿ ಪರಿಶೀಲಿಸಲಾಗಿದೆ. ಚರಿತ್ರೆ ಪೂರ್ವ ಎಡೆಗಳನ್ನು ಜನಸಾಮಾನ್ಯರು ಸಾಮಾನ್ಯವಾಗಿ ದೆವ್ವ, ಭೂತ, ರಾಕ್ಷಸ, ವಾಸಿಸುವ

ಸ್ಥಾನಗಳೆಂಬುದಾಗಿ ಗುರುತಿಸುವುದುಂಟು. ವಾಸ್ತವ್ಯದಲ್ಲಿ ಇವು ಪುರಾತತ್ವ ನಿವೇಶನ ಸಂಬಂಧಿ ಎಡೆಗಳೆನ್ನಬಹುದು. ಚಿತ್ರದುರ್ಗದ ಬೆಟ್ಟ ಮತ್ತು ಪರಿಸರದಲ್ಲಿ ನೆಲೆಗೊಂಡಿರುವ ಇಂತಹ ಎಡೆಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ (ತೆಲಗಾವಿ ೧೯೯೭:೨೦೨).

೫. ಭಾರತದಂತಹ ದೇಶದಲ್ಲಿ ನಮ್ಮ ಇತಿಹಾಸ ತಿಳಿಯಬೇಕಾದಲ್ಲಿ ಬಿಟ್ಟುಹೋಗಿರುವ ಅವಶೇಷಗಳು ಅದರ ಐತಿಹ್ಯಗಳು ಜಾನಪದದ ಮೂಲಕ, ಲಡಾಯಿ, ಲಾವಣಿ, ಸಾಹಿತ್ಯ, ಕಲೆ, ವಾಸ್ತುಶಿಲ್ಪ, ನಾಣ್ಯ, ಪತ್ರ, ಶಾಸನಗಳ ಮೂಲಕ ಇದರ ಜೊತೆಗೆ ಭೂಗರ್ಭ ವಿಜ್ಞಾನ ಪರೀಕ್ಷೆಯ ಇಲಾಖೆಗಳ ಮೂಲಕ ಹಾಗೂ ಸಂಶೋಧನೆಯ ಮೂಲಕ ಶಾಸನವನ್ನು ಅದರ ಆಯುಷ, ವೈಭವೀಯತೆಯ ಬಗ್ಗೆ ತಿಳಿಯಬಹುದಾಗಿದೆ. ಇಂತಹುದೇ ಒಂದು ಚಿತ್ರದುರ್ಗದ ಪುರಾತತ್ವ ಇಲಾಖೆಯು ಚಿತ್ರದುರ್ಗವು ೨೬೦ ಕೋಟಿ ವರುಷಗಳ ಹಿಂದೆ ಇದ್ದಂತಹ ಇತಿಹಾಸ ಪ್ರಸಿದ್ಧ ಸ್ಥಳವಾಗಿದ್ದು, ಸಂಪದ್ಭರಿತ ಮತ್ತು ಆಯಕಟ್ಟಿನ ನಾಡಾಗಿದ್ದಿತು ಎಂಬುದನ್ನು ಮೈಸೂರು ಭೂಗರ್ಭ ಇಲಾಖೆಯ ಸಂಪತ್ತೈಯಂಗಾರ್‌ರವರು ೧೯೦೫ರಲ್ಲಿ ಸರ್ವೇಕ್ಷಣೆಯ ಮೂಲಕ ತಿಳಿಸಿದ್ದಾರೆ. ಇದರಿಂದ ಚಿತ್ರದುರ್ಗದ ಪ್ರಾಚೀನ ಇತಿಹಾಸದ ಬಗ್ಗೆ ತಿಳಿಯುವಂತಾಗಿದೆ. ಜೊತೆಗೆ ಈ ಪ್ರದೇಶದಲ್ಲಿ ಗ್ರಾನೈಟ್, ಕಣಜಶಿಲೆ, ಮರಳುಶಿಲೆ, ಪೆಂಡಿಶಿಲೆ, ಸುಣ್ಣಶಿಲೆ, ಜೇಡುಶಿಲೆ, ಚಿನ್ನದ ಗಣಿ, ಮ್ಯಾಂಗನೀಸ್ ಮುಂತಾದ ಖನಿಜ ಸಂಪತ್ತನ್ನು ಹೊಂದಿರುವ ಪ್ರದೇಶವಾಗಿದೆ (ತಿಪ್ಪೇಸ್ವಾಮಿ ೨೦೦೪:೮–೯).

೬. ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಪಟ್ಟಂತೆ ಅನೇಕ ಇತಿಹಾಸಕಾರರು ಮತ್ತು ಸಂಶೋಧಕರುಗಳಾದ ಕಲಬುರ್ಗಿ, ಚಿದಾನಂದಮೂರ್ತಿ, ಶಿವರುದ್ರಪ್ಪ, ತೆಲಗಾವಿ, ವೆಂಕಣ್ಣಾಚಾರ್ ಹಾಗೂ ಸ್ಥಳೀಯ ಇತಿಹಾಸಕಾರರು ಮತ್ತು ಸಂಶೋಧಕರಾದ ವಿಜಯ್ ಪೂಣಚ್ಚ ತಂಬಂಡ ಹಾಗೂ ಶ್ರೀನಿವಾಸ ಮುಂತಾದವರ ಸಹಾಯದ ಮೂಲಕ ಚಿತ್ರದುರ್ಗದ ಪ್ರಾಚೀನ ನಾಮ, ಭೌಗೋಳಿಕ ಪರಿಸರ, ವ್ಯಾಪ್ತಿ, ಆಡಳಿತ ವ್ಯವಸ್ಥೆಯ ಬಗ್ಗೆ ತಮ್ಮ ವ್ಯಾಖ್ಯೆಗಳನ್ನು ನೀಡಿದ್ದಾರೆ. ದುರ್ಗಕ್ಕೆ ಸಂಬಂಧಿಸಿದಂತೆ ಘೋಷ ಇವರ 'ಲೆಜೆಂಡ್ಸ್ ಫ್ರಂ, ಇಂಡಿಯನ್ ಹಿಸ್ಟರಿ' ಮುಂತಾದ ಕೃತಿಗಳು ಈ ಐತಿಹ್ಯದ ಬಗ್ಗೆ ವಿಶೇಷ ಆಸಕ್ತಿ ನೀಡಿರುವುದನ್ನು ನೋಡಬಹುದಾಗಿದೆ. ಇಲ್ಲಿ ಆಡಳಿತಕ್ಕೆ ಕೋಟೆ ಮುಖ್ಯ ಆಧಾರವಾಗಿದೆ. ಕೋಟೆಯಿಲ್ಲದ ರಾಜ, ಮೂಳೆ, ಮಾಂಸ, ರಕ್ತವಿಲ್ಲದ ಮಾನವನಂತೆ. ಆತ್ಮವಿಲ್ಲದ ದೇಹವಿದ್ದಂತೆ, ಆದ್ದರಿಂದಲೇ ಬಲಿಷ್ಠ ಆಡಳಿತಕ್ಕೆ ರಾಜ, ಸೈನ್ಯದ ಜೊತೆಗೆ ಕೋಟೆಯ ಅವಶ್ಯಕವಾದ ಅಂಶವಾಗಿದೆ.

ಐತಿಹ್ಯ ಪದವನ್ನು (ಲೆಜೆಂಡ್) ಎನ್ನುವ ಲ್ಯಾಟಿನ್ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. ಅಲ್ಲಿ ಅದಕ್ಕೆ Things to be read, ಎಂಬ ಅರ್ಥವಿದೆ. ಫ್ರೆಂಚ್ ಭಾಷೆಯಲ್ಲಿಯೂ ಇದೇ ಅರ್ಥ ಉಳಿದು ಬೆಳೆದುಕೊಂಡು ಬಂದಿದೆ (ಕಿರ್ಮ್ ಪ್ಯಾಟ್ರಿಕ್). ಇವು ಪ್ರಾರ್ಥನಾ ಮಂದಿರಗಳಲ್ಲಿ ಪಠನ ಮಾಡಬಹುದಾದ ವಿಷಯಗಳಾಗಿದ್ದವು. ಈ ಕಾರಣಕ್ಕೇನೆ, ಪಠನ ಮಾಡಬಹುದಾದ ವಿಚಾರಗಳಿಗೆ ಬೈಬಲ್ಲನ್ನು ಅಥವಾ ಸಾಧು ಸಂತರ ಜೀವನ ಚರಿತ್ರೆಯನ್ನು ಆಧಾರವಾಗಿ ಇಟ್ಟುಕೊಳ್ಳಲಾಗಿತ್ತು. ಮಧ್ಯಯುಗೀನ ಇಂಗ್ಲೀಷ್ ಬರಹಗಾರರು ಲೆಜೆಂಡ್ ಎಂಬ ಪದವನ್ನು ಮೇಲಿನ ಅರ್ಥದಲ್ಲಿಯೇ ಬಳಸಿಕೊಂಡಿದ್ದನ್ನು ಗಮನಿಸಿ ಆಂಗ್ಲಭಾಷೆಯ ನಿಘಂಟುಗಳಲ್ಲಿ ಅದೇ ಅರ್ಥವನ್ನು ಉಳಿಸಿಕೊಂಡರು. ಮುಂದುವರೆದು ಇದಕ್ಕೆ ಸಂಬಂಧಿಸಿದಂತೆ, ಕಿಟ್ಟೆಲ್ ನಿಘಂಟುವಿನಲ್ಲಿ ಅವುಗಳ ಪ್ರಕಾರ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟುವಿನಲ್ಲಿ ಐತಿಹ್ಯಗಳ ಪ್ರಕಾರಗಳನ್ನು ಮಾಡಲಾಗಿದೆ.

೧. ಸ್ಥಳೀಯ ಐತಿಹ್ಯಗಳು

೨. ವಿವರಣಾತ್ಮಕ ಐತಿಹ್ಯಗಳು

೩. ಚಾರಿತ್ರಿಕ ಐತಿಹ್ಯಗಳು

**ಸ್ಥಳೀಯ ಐತಿಹ್ಯಗಳಲ್ಲಿ ಮತ್ತೆ ೬ ಒಳಪ್ರಕಾರಗಳು.**

೧. ಪ್ರವಾಹ ಐತಿಹ್ಯ

೨. ಬಲಿಗಳ ಐತಿಹ್ಯ

೩. ಕೌಟುಂಬಿಕ ಐತಿಹ್ಯ

೪. ಚಾರಿತ್ರಿಕ ಐತಹ್ಯ

೫. ಜಾನಪದ ನಿರುಕ್ತಿಯ ಐತಿಹ್ಯ

೬. ವಿವರಣಾತ್ಮಕ ಐತಿಹ್ಯ

(ಕನ್ನಡ ವಿಶ್ವಕೋಶ ೧೯೭೧:೨೫೭)

**ಡಾರ್ಸನ್ನರ ವರ್ಗೀಕರಣದಂತೆ ೩ ಬಗೆಯ ಐತಿಹ್ಯ**

೧. ವ್ಯಕ್ತಿ ಪ್ರಧಾನ ಐತಿಹ್ಯಗಳು

೨. ಸ್ಥಳ ಪ್ರಧಾನ ಐತಿಹ್ಯಗಳು

೩. ಘಟನಾ ಪ್ರಧಾನ ಐತಿಹ್ಯಗಳು

(ತಾಳ್ತಜೆ ೧೯೮೫:೧೨೨)

ಹೀಗೆ ಐತಿಹ್ಯಗಳು ಬಹು ವಿಧವಾಗಿರುತ್ತವೆ. ಚರಿತ್ರೆಯ ಗೂಢ ಸತ್ಯವೊಂದನ್ನು ಗರ್ಭದಲ್ಲಿ ಹುದುಗಿಸಿಕೊಂಡು ಜನರನ್ನು ಸಾಂಕೇತಿಕವಾಗಿ ಆಳುತ್ತಿರುತ್ತದೆ. ಐತಿಹ್ಯದ ಅವಲಂಬನೆಯಿಲ್ಲದೆ ಜನಪದರ ಜೀವನಕ್ರಮ ಸುಗಮವಾಗಿ ಸಾಗಲಾರದು ಎಂಬುದಾಗಿ ಹೇಳಬಹುದಾಗಿದೆ (ತಿಪ್ಪೇಸ್ವಾಮಿ ೨೦೦೪:೨೦-೨೧).

## ಕೋಟೆಯ ರಚನೆಯ ಸ್ವರೂಪ

ಚಿತ್ರದುರ್ಗದಲ್ಲಿ ಕೋಟೆಯ ನಿರ್ಮಾಣ ಕ್ರಿ.ಶ. ೩-೪ನೇ ಶತಮಾನದಲ್ಲಿ ಆಳ್ವಿಕೆ ಮಾಡಿದ ಶಾತವಾಹನರ ಕಾಲದಿಂದಲೇ ಪ್ರಾರಂಭವಾಯಿತೆನ್ನಬಹುದು. ಅವರ ಕಾಲದಲ್ಲಿ ಪ್ರಮುಖ ಪಟ್ಟಣವಾಗಿದ್ದ. ಚಂದ್ರವಳ್ಳಿಯ ಭೂಶೋಧನೆಯಲ್ಲಿ ದೊರೆತ ಪುರಾತತ್ವ ಅವಶೇಷಗಳು ಇಂತಹ ಊಹೆಗೆ ಅವಕಾಶ ಕಲ್ಪಿಸಿದೆ. ಶಾತವಾಹನರು ತಮ್ಮ ರಕ್ಷಣಾ ವಾಸ್ತುಶಿಲ್ಪದಲ್ಲಿ ನಿರ್ದಿಷ್ಟ ಪಡಿಸಿದ ಆಕಾರದ ಇಟ್ಟಿಗೆಗಳು ಕೋಟೆ ನಿರ್ಮಾಣದ ಪರಿಕರಗಳು, ಇವರು ನಿರ್ಮಿಸಿದ ಕೋಟೆಗಳ ಸಂಪೂರ್ಣ ವಿವರಗಳು ದೊರೆಯಾಗಿದ್ದರೂ ಮುಂಚೂಣಿ ಪ್ರದೇಶದಲ್ಲಿ ರಕ್ಷಣಾ ಗೋಡೆಗಳು ಇದ್ದವೆಂಬುದು ಅಲ್ಲಲ್ಲಿ ದೊರೆತ ತುಂಡು ಗೋಡೆಯ ಸ್ತರಗಳ ಅವಶೇಷಗಳಿಂದ ನಿರ್ಣಯಿಸಬಹುದು. ಶಾತವಾಹನರ ತರುವಾಯ ಕದಂಬರು ಈ ಭಾಗದಲ್ಲಿ ಆಳ್ವಿಕೆ ನಡೆಸಿರುವುದಕ್ಕೆ ಮಯೂರವರ್ಮನ ಚಂದ್ರವಳ್ಳಿಯ ಶಾಸನವು ಪ್ರಮುಖ ಆಧಾರವಾಗಿದೆ.

ಕೋಟೆಗಳ ರಚನೆಯನ್ನು ಯುದ್ಧ ಕಲೆಗೆ ಅನುಗುಣವಾಗಿ ನಿರ್ಮಿಸಿರುವುದನ್ನು ವಿಜಯನಗರ ಮತ್ತು ವಿಜಯನಗರದ ತರುವಾಯವೆಂದು ಹೇಳಬಹುದು. ಇವರ ಆಡಳಿತ ಕೇಂದ್ರಬಿಂದು ಚಿಮ್ಮತ್ತನಕಲ್ಲು ಆಗಿದ್ದಿತು. ಇವರು ಚಿತ್ರದುರ್ಗದ ಕೋಟೆಯನ್ನು ಮತ್ತಷ್ಟು ಬಲಪಡಿಸಿ

ವಿಸ್ತಾರಗೊಳಿಸಿದರೂ ಅತ್ಯಂತ ನಯಗೊಳಿಸಿದ ಭಾರೀ ದೊಡ್ಡ ಗಾತ್ರದ ಕಲ್ಲುಗಳನ್ನು ಬಳಸಿ ಸುಂದರವಾದ ಕೋಟೆಯ ನಿರ್ಮಾಣಕ್ಕೆ ಇವರು ಸಹ ಕಾರಣರಾದರು. ಮಲ್ಲಿನಾಥ ಒಡೆಯರು ಸಂಪಿಗೆ ಸಿದ್ದೇಶ್ವರ ದೇವರಿಗೆ ಕಲ್ಲುಪ್ಪರಿಗೆ ಕಲ್ಲಿನಿ ಉಯ್ಯಾಲೆ ಮಾಡಿಸಿ ಶಿಖರ ಪ್ರತಿಷ್ಠೆ ಮಾಡಿಸಿದ ವಿವರಗಳನ್ನು ಶಾಸನವೊಂದು ತಿಳಿಸುತ್ತದೆ. ಈ ಶಾಸನದಲ್ಲಿ ಮಲ್ಲಿನಾಥ ಒಡೆಯನಿಗೆ ನಡುಗೊಂಟಿಮಲ್ಲ ಎಂಬ ಬಿರುದಿರುವುದು ಕಂಡುಬರುವುದಲ್ಲದೆ ಚಿತ್ರದುರ್ಗದ ಬೆಟ್ಟದ ಮೇಲಿನ ಕೋಟೆಯ ವರ್ಣನೆ ತಿಳಿದುಬರುತ್ತದೆ. ಆಗಳು, ಅಳುವೇರಿ, ಒತ್ತೇರಿ, ಕೊತ್ತಲ, ಒಡ್ಡಂಗಳು, ಈ ಬಾವುಟದ ದಿಣ್ಣೆಗಳು ತುಂಬಿ ತುಳುಕುತ್ತಿದ್ದವು. ಅಂತಹ ಕೋಟೆಯನ್ನು ಏನೆಂದು ವರ್ಣಿಸಲಿ, ಸ್ವ ಸೇನೆಗೂ, ಶತ್ರುಸೇನೆಗೂ ವಜ್ರಕೋಟೆಯಂತೆ ತೋರುವುದೆಂದು ಕೋಟೆಯನ್ನು ಚಿತ್ರಿಸಲಾಗಿದೆ. ವಿಜಯನಗರದ ಅರಸರ ತರುವಾಯ ಚಿತ್ರದುರ್ಗ ಪಾಳೆಯಗಾರರು ಚಿತ್ರದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಇವರ ಅವಧಿಯಲ್ಲಿ ಚಿತ್ರದುರ್ಗವು ಮೊದಲಿಗಿಂತಲೂ ಹೆಚ್ಚು ವಿಸ್ತಾರಗೊಂಡು ಏಳು ಸುತ್ತಿನ ಕೋಟೆ ಎಂಬ ಖ್ಯಾತಿಗೆ ಪಾತ್ರವಾಯಿತು. ಇವರು ನಿರ್ಮಿಸಿದ ಕೋಟೆಯೂ ಸಿಡಿಲಿಗೂ, ಮಳೆಗೂ ಜಗ್ಗದ ಉಕ್ಕಿನ ಕೋಟೆ ಎಂಬ ಹೆಸರು ಪಡೆಯಿತು. ಭಾರತದಲ್ಲಿ ಅಭೇದ್ಯ ಗಿರಿದುರ್ಗಗಳ ಸಾಲಿಗೆ ಈ ಕೋಟೆಯು ಸರಿಸಮಾನವಾಗಿ ನಿಲ್ಲಲು ಪಾಳೆಯಗಾರರು ಕಾರಣರಾದರು. ಪಾಳೆಯಗಾರರ ಪತನಾನಂತರ ಇಲ್ಲಿನ ಇತಿಹಾಸ ಮುಂದುವರೆಯಿತು. ಹೈದರಾಲಿ, ಟಿಪ್ಪು ಮತ್ತು ಬ್ರಿಟಿಷರು ಇಲ್ಲಿನ ಕೋಟೆಯನ್ನು ಮತ್ತಷ್ಟು ಬಲಪಡಿಸಿದರು. ಮೈಸೂರು ಒಡೆಯರ ನಂತರ ಕೋಟೆಯು ಯಾವುದೇ ಅಭ್ಯುದಯ ಕಾಣದೆ ಶಿಥಿಲವಾಗುತ್ತಾ ಹೋಯಿತು.

ಭರತ ಖಂಡದಲ್ಲಿ ವ್ಯವಸ್ಥಿತವಾಗಿ ನಿರ್ಮಾಣಗೊಂಡ ಕೋಟೆಗಳಲ್ಲಿ ಚಿತ್ರದುರ್ಗ ಕೋಟೆಯೂ ಒಂದು. ಶಾಸನೋಕ್ತವಾಗಿ ಇಲ್ಲಿ ೧೧ನೆಯ ಶತಮಾನದಲ್ಲಿ ಕೋಟೆ ಇದ್ದಿತಾದರೂ ಬೇರೆ ಬೇರೆ ಕಾಲಾವಧಿಯಲ್ಲಿ ಅಭಿವೃದ್ಧಿ ಹೊಂದಿ ವಿಸ್ತಾರಗೊಂಡಿದೆ. ಬೆಟ್ಟದಲ್ಲಿರುವ ಹೆಚ್ಚು ಭಾಗ ಚಿತ್ರದುರ್ಗ ಪಾಳೆಯಗಾರ ಅವಧಿಯಲ್ಲಿ ನಿರ್ಮಾಣಗೊಂಡಿದೆ. ಈ ಕೋಟೆ ರಚನೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಿವಿಧ ರೀತಿಯ ಚಿತ್ರಣ ನಮಗೆ ದೊರೆಯುತ್ತದೆ. ಪ್ರಾರಂಭದ ಹಂತದಲ್ಲಿ ನಿರ್ಮಾಣಗೊಂಡ ಕೋಟೆಯ ಭಾಗಗಳು ಕೆಲವು ಕಡೆ ಇನ್ನೂ ಬೆಳೆದುಕೊಂಡು ಬಂದಿದೆ. ಇಂತಹ ಕೋಟೆಯನ್ನು ಒನಕೆ ಕಿಂಡಿ, ಮುಂಭಾಗ ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟ ಸಂಪಿಗೆ ಸಿದ್ದೇಶ್ವರ ದೇವಾಲಯದ ಹಿಂಭಾಗ ಹಾಗೂ ಈರಣ್ಣನ ದೇವಾಲಯ ಪ್ರದೇಶದಲ್ಲಿ ಕಾಣಬಹುದು (ಶೇಷಾದ್ರಿ ೧೯೫೬:೧೫ ; ಹೆಗಡೆ ೧೯೯೨:೩೬).

ತಿಪ್ಪೇಸ್ವಾಮಿಯವರು ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ, ೨೦೦೪ ಎನ್ನುವ ಲೇಖನದಲ್ಲಿ ಈ ಕುರಿತಾದ ವಿಚಾರಗಳನ್ನು ವಿಶ್ಲೇಷಿಸಿದ್ದಾರೆ. ಕೋಟೆಗಳು ರಾಜ್ಯ ವ್ಯವಸ್ಥೆಯ ಸಂದರ್ಭದಲ್ಲಿ

ರಕ್ಷಣೆಯನ್ನು ಒದಗಿಸುತ್ತಿದ್ದವು. ಕೋಟೆಯ ಬಗೆಗೆ ಹೆಚ್ಚು ತಿಳಿಯಬೇಕಾದರೆ ನಾವು ಸಾಹಿತ್ಯ ಮತ್ತು ಶಾಸನಗಳನ್ನು ಮೊರೆಹೋಗಬೇಕಾಗುತ್ತದೆ. ಪ್ರಾಚೀನ ಕಾಲದ ಕೋಟೆ ಕೊತ್ತಲಗಳ ರಚನೆಯ ವಿನ್ಯಾಸವನ್ನು ಮಾನಸಾರ, ಮಯಾಮತ, ವಿಶ್ವಕರ್ಮ ವಾಸ್ತಾ ಹಾಗೂ ಶಿಲ್ಪರತ್ನ ಪುರಾಣಗಳಾದ ಮತ್ಸ್ಯಪುರಾಣ. ಮಾರ್ಕಂಡೇಯಪುರಾಣ, ವಿಷ್ಣುಪುರಾಣ, ರಾಜನೀತಿ ಸಾಹಿತ್ಯ ಕೃತಿಗಳಾದ ಕೌಟಿಲ್ಯನ ಅರ್ಥಶಾಸ್ತ್ರ, ಮನುಸ್ಮೃತಿ, ಶುಕ್ರನೀತಿಸಾರ, ಬೃಹತ್‌ಸಂಹಿತಾ ಇತ್ಯಾದಿ ಕೃತಿಗಳಿಂದ ಕಾಣಬಹುದು.

ಕೌಟಿಲ್ಯನ ರಾಜನೀತಿ ಗ್ರಂಥವಾದ ಅರ್ಥಶಾಸ್ತ್ರದಲ್ಲಿ ಒಂದು ರಾಜ್ಯಕ್ಕೆ ಪ್ರಮುಖವಾಗಿ ಸಪ್ತಾಂಗಗಳಿರಬೇಕು ಅವುಗಳೆಂದರೆ ರಾಜ, ಅಮಾತ್ಯ, ರಾಜಧಾನಿ, ಕೋಶ, ದುರ್ಗ, ಮಿತ್ರ ಮತ್ತು ಸೈನ್ಯ. ಇವುಗಳಲ್ಲಿ ದುರ್ಗ ಕೋಟೆಗೆ ಮುಖ್ಯ ಸ್ಥಾನ ನೀಡಲಾಗಿದೆ. ಹೀಗೆ ಅರ್ಥಶಾಸ್ತ್ರದಲ್ಲಿ ರಾಜನು ತನ್ನ ರಾಜ್ಯದ ಗಡಿಯ ೪ ದಿಕ್ಕುಗಳಲ್ಲಿ ಶತ್ರುಗಳನ್ನು ತಡೆಗಟ್ಟಲು ಸೂಕ್ತವಾದ ಕೋಟೆಗಳನ್ನು ಕಟ್ಟಬೇಕೆಂದು ಹೇಳಿದ್ದಾನೆ. ಮನುವಿನ ಅಭಿಪ್ರಾಯದಂತೆ ಒಬ್ಬ ಬಿಲ್ಲುಗಾರ ಕೋಟೆಗೋಡೆಯ ರಕ್ಷಣೆಯಲ್ಲಿ ನೂರಾರು ಶತ್ರುಗಳೊಂದಿಗೆ ಹೋರಾಟ ನಡೆಸಬಹುದು ಎಂದು ಹೇಳುತ್ತಾ ಕೋಟೆಗಳನ್ನು ಕಟ್ಟುವುದನ್ನು ಸಮರ್ಥಿಸಿಕೊಳ್ಳುತ್ತಾನೆ. ಪಂಚತಂತ್ರದ ಕೃತಿಯಲ್ಲಿ ಸಾವಿರಾರು ಆನೆಗಳಿಂದ ಮತ್ತು ಲಕ್ಷಾಂತರ ಕುದುರೆಗಳಿಂದ ಯುದ್ಧದಲ್ಲಿ ನಿರ್ವಹಿಸಲಾದ ಕಾರ್ಯವನ್ನು ಒಬ್ಬರಾಜ ಕೋಟೆಯ, ಸಹಾಯದಿಂದ ಆಶ್ಚರ್ಯಕರವಾಗಿ ನಿರ್ವಹಿಸಬಲ್ಲನು ಎಂದು ಹೇಳಲ್ಪಟ್ಟಿದೆ. ಬೃಹಸ್ಪತಿಯ ರಾಜನೀತಿ ಪ್ರಕಾಶದಲ್ಲಿ "ರಾಜನು ತನ್ನ ಪರಿವಾರ, ಜನರು ಮತ್ತು ಸಂಪತ್ತಿನ ರಕ್ಷಣೆಗಾಗಿ ಭದ್ರವಾದ ಗೋಡೆ ಮತ್ತು ಬಾಗಿಲುಳ್ಳ ಕೋಟೆಯನ್ನು ಅವಶ್ಯಕವಾಗಿ ಕಟ್ಟಬೇಕು" ಎಂದು ಹೇಳುತ್ತದೆ. ಕಾಮಂದಕನ ನೀತಿ ಸಾರದಲ್ಲಿನ ಸಂಸ್ಕೃತದ ಶ್ಲೋಕವನ್ನು ಎಂ. ಚಿದಾನಂದಮೂರ್ತಿಯವರು ಈ ರೀತಿ ವಿವರಿಸಿದ್ದಾರೆ. "ದುರ್ಗಹೀನೋ ನರಪತಿ: ವಾತಾಭ್ರಾವವಯವೈಸ್ಸಮ" ಅಂದರೆ ಭದ್ರವಾದ ಕೋಟೆಯಿಲ್ಲದ ರಾಜನು ಬಿರುಗಾಳಿಯ ಮುಂದಿನ ಮೋಡದ ತುಂಡುಗಳಿಗೆ ಸಮ ಎಂದರ್ಥ. ಶುಕ್ರ ನೀತಿಸಾರದಲ್ಲಿ ಅನೇಕ ರೀತಿಯ ಗಿಡಮರಗಳ ಪೊದರುಗಳಿಂದ ಕೂಡಿದ ದನಕರುಗಳು, ಹಕ್ಕಿಗಳು ಮತ್ತಿತರ ಪ್ರಾಣಿಗಳಿಂದ ಸಮೃದ್ಧವಾಗಿರುವ ಧಾನ್ಯ ಸಮೃದ್ಧಿ ಇರುವ, ಬೆಟ್ಟ ನೀರುಗಳಿಂದ ಆವೃತವಾಗಿರುವ ಪ್ರದೇಶಗಳಲ್ಲಿ ಕೋಟೆಗಳನ್ನು ನಿರ್ಮಿಸಬೇಕು ಎಂದು ಉಲ್ಲೇಖವಿದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ೧೫-೧೬-೧೭ನೇ ಶತಮಾನಗಳಲ್ಲಿ ಕೋಟೆಗಳ ನಿರ್ಮಾಣ ಹೆಚ್ಚಾದವು. ಇದ್ದಕ್ಕಿದ್ದಂತೆ ರಾಜಕೀಯ ಒತ್ತಡಗಳೇನು? ಈ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಂಡರೆ ಕೋಟೆಗಳ ಸ್ಥಾಪನೆ, ನಿರ್ಮಾಣ ಕರ್ನಾಟಕದ ಸಾಮಾಜಿಕ, ಆರ್ಥಿಕ ಸ್ಥಿತಿಗತಿ ಎಲ್ಲವೂ ಸ್ಪಷ್ಟವಾಗಿ ಅರ್ಥವಾಗುತ್ತದೆ.

ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಅಧಿಕಾರವು ವಿಕೇಂದ್ರೀಕರಣಗೊಂಡಿದೆ. ಈ ಸಾಮ್ರಾಜ್ಯದಲ್ಲಿದ್ದ ಪಾಳೇಗಾರರು ಕೇಂದ್ರಕ್ಕೆ ಅಧೀನವಾಗಿದ್ದರೂ ಅವರು ತಮ್ಮ ಪ್ರದೇಶಕ್ಕೆ ಸಂಬಂಧಿಸಿದ ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳುವಾಗ ಕೇಂದ್ರದ ಅನುಮತಿ ಬೇಕಿತ್ತು. ಹೀಗಾಗಿ ಮಾಂಡಲೀಕರು. ಅಮರ ನಾಯಕರು ವಿಜಯನಗರ ಸಾಮ್ರಾಜ್ಯವು ತಾಳಿಕೋಟೆ ಯುದ್ಧದಲ್ಲಿ (೧೫೬೫) ಸೋತ ಬೆನ್ನಲ್ಲೇ ಸ್ವತಂತ್ರವನ್ನು ಘೋಷಿಸಿಕೊಂಡರು ಪ್ರತಿಯೊಂದು ಚಿಕ್ಕ ಚಿಕ್ಕ ಪ್ರಾಂತ್ಯಗಳು ಸ್ವತಂತ್ರ ಅಧಿಕಾರವನ್ನು ಹೊಂದಿ ತಮ್ಮ ಪ್ರದೇಶ ವಿಸ್ತರಣೆಗಾಗಿ ಯುದ್ಧಗಳಾದವು. ಚಿತ್ರದುರ್ಗ, ಕೆಳದಿ, ಹರಪನಹಳ್ಳಿ, ನಿಡುಗಲ್ಲು, ಹಾಗಲವಾಡಿ, ರಾಯದುರ್ಗ, ಹರತಿ, ಜರ್ಮಲೆ, ಎಲ್ಲೂತ್ತೂರು ಹೀಗೆ ಹತ್ತು ಹಲವು ಸ್ಥಳಗಳಲ್ಲಿನ ಪಾಳೆಗಾರರು ಸ್ವತಂತ್ರಗೊಂಡು ನಿರಂತರ ಯುದ್ಧಗಳಲ್ಲಿ ತೊಡಗಿದರು. ಈ ನಿರಂತರ ಯುದ್ಧಗಳಿಂದಾಗಿ ೧೬-೧೭ ನೇ ಶತಮಾನದಲ್ಲಿ ಪ್ರತಿಯೊಂದು ಅಧಿಕಾರ ಕೇಂದ್ರವು ಕೋಟೆಗಳ ನಿರ್ಮಾಣಕ್ಕೆ ತೊಡಗಿದ್ದವು. ಯುದ್ಧ ಸಂದರ್ಭದಲ್ಲಿ ಉಂಟಾಗುತ್ತಿದ್ದ ದರೋಡೆ. ಅತ್ಯಾಚಾರ ದೌರ್ಜನ್ಯಗಳಿಂದ ಸಂರಕ್ಷಿಸಿಕೊಳ್ಳಲು ಜನಸಮುದಾಯವು ಕೋಟೆಗಳ ನಿರ್ಮಾಣ ಕಾರ್ಯದಲ್ಲಿ ಪಾಲ್ಗೊಂಡರು. ಕೋಟೆಗಳನ್ನು ತಮ್ಮ ಜೀವನದ ಒಂದು ಭಾಗವನ್ನಾಗಿಸಿಕೊಂಡು ಈ ಜನರ ಹಾಡು, ಕಥೆ, ನಂಬಿಕೆ, ಆಚರಣೆಗಳನ್ನು ಗಮನಿಸಿದರೆ ಇವರು ಕೋಟೆಯೊಂದಿಗೆ ಹೊಂದಿರುವ ಆತ್ಮೀಯತೆಯನ್ನು ಅರಿಯಬಹುದಾಗಿದೆ.

ಕೋಟೆಯ ರಕ್ಷಣಾ ಸ್ವರೂಪದ ರಚನೆ ಎಂಬ ಅಂಶ ದೃಢವಾಗಿದ್ದರೂ ಸಂರಕ್ಷಣಾತ್ಮಕ ಸ್ವರೂಪದ ಕೋಟೆಗಳ ನಿರ್ಮಾಣದಲ್ಲಿ ಆಂಗಿದ್ದಾಗ್, ಹಲವಾರು ಬದಲಾವಣೆ ಆಗಿರುವುದು ಕಾಣಬಹುದಾಗಿದೆ. ಈ ಬದಲಾವಣೆಗಳನ್ನು ಕೋಟೆಯ ಗಾತ್ರ, ಕಟ್ಟುವ ವಿಧಾನ, ವಿವಿಧ ವಿನ್ಯಾಸ, ಆರ್ಥಿಕ, ರಕ್ಷಣಾತ್ಮಕ ಸಾಧನಗಳು, ಆಯುಧಗಳು, ಬದಲಾದ ಯುದ್ಧ ಸಾಮಗ್ರಿಗಳು, ಸಮಕಾಲೀನ ಯುದ್ಧ ತಂತ್ರಗಳು ಮುಂತಾದವುಗಳಿಂದ ತಿಳಿಯಬಹುದಾಗಿದೆ.

ಪ್ರಾರಂಭದಲ್ಲಿ ಮುಳ್ಳಿನ ಬೇಲಿ, ದಸದಕೊಪ್ಪ, ಮಂದದಿಮ್ಮಿಗಳಿಂದ ನಿರ್ಮಿಸಿದ ಬೇಲಿಗಳಿಂದ ಪ್ರಾರಂಭವಾದ ಈ ರಕ್ಷಣೆಯು ಕ್ರಮೇಣ ಗಾತ್ರ ಮತ್ತು ಭದ್ರತೆಯ ದೃಷ್ಟಿಯಲ್ಲಿ ಸಂಕೀರ್ಣತೆಯನ್ನು ಪಡೆದುಕೊಂಡಿದೆ. ನಂತರದ ದಿನಗಳಲ್ಲಿ ಮಣ್ಣಿನ ಮತ್ತು ಕಲ್ಲಿನ ಕೋಟೆಗಳು ನಿರ್ಮಾಣವಾದವು. ಕ್ರಿ.ಪೂ. ೬ನೇ ಶತಮಾನದ ವೇಳೆಗೆ ಬಂಡೆಗಳನ್ನು ಕಡಿದು ಮಾಡಿದ ಗುಹವಾಸ್ತು ಶಿಲ್ಪವು ಪ್ರಗತಿಯ ತುದಿಯನ್ನು ತಲುಪಿ ಗಿರಿದುರ್ಗಗಳ ಕ್ಷಿಪ್ರ ಬೆಳವಣಿಗೆಗೆ ಕಾರಣವಾದವು. ಹಾಗೂ ಕಲ್ಲಿನ ಜೋಡಣೆಯ ಭಾಗಗಳು ಪರಿಪೂರ್ಣವಾಗಿದ್ದು ಅವುಗಳನ್ನು ಜೋಡಿಸುವುದರ ಜೊತೆಗೆ ಯಾವುದೇ ಗಾರೆಯ ಬಳಕೆ ಮಾಡದೇ ನಿರ್ಮಿಸಿಕೊಳ್ಳುತ್ತಾ ಬಂದಿದ್ದಾರೆ. ತರುವಾಯ ದುರ್ಗಗಳಲ್ಲಿ ಗಾರೆಯನ್ನು ವಿರಳವಾಗಿ ಬಳಸಲು ಪ್ರಾರಂಭಿಸಲಾಯಿತು. ಕೋಟೆಗಳ ಗಾತ್ರ. ವಿಸ್ತಾರ. ಕೋಟೆಯ ಬಾಗಿಲಿನ ಮೇಲೆ ಗೋಪುರಗಳು. ಬಂದೂಕುಗಳನ್ನು ತೂರಿಸಲು

ಹಾಗೂ ಕೋಟೆಯ ಒಳಗಿನಿಂದ ಹೊರಗಿನ ದೃಶ್ಯಗಳನ್ನು ನೋಡಲು, ಸಹಾಯಕವಾಗುವಂತೆ ಕೋಟೆಯ ಗೋಡೆಗೆ ಬಿಟ್ಟಿರುವ ಬಂದೂಕು ರಂಧ್ರಗಳು ಕೋಟೆಯ ನಿರ್ಮಾಣದಲ್ಲಿ ಅವುಗಳ ಸ್ವರೂಪ ಗಾತ್ರದಲ್ಲಿಯು ಹೆಚ್ಚಾಗಿರುವುದು ಈ ಕಾಲದ ಕೋಟೆಗಳ ಪ್ರಮುಖ ಲಕ್ಷಣವಾಗಿದೆ. ಕೋಟೆಯ ಬಾಗಿಲು, ಗೋಡೆ, ಕೊತ್ತಲು, ಗೋಪುರ, ಬುರುಜುಗಳನ್ನು ಗಾತ್ರ ಮತ್ತು ವಿಸ್ತಾರದಲ್ಲಿ ಹೆಚ್ಚಿರುವುದನ್ನು ಕಾಣಬಹುದಾಗಿದೆ. ಈ ಬೆಳವಣಿಗೆಯು ಮಧ್ಯಯುಗೀನ ಭಾರತದಲ್ಲಿ ಕೋಟೆಗಳ ತಾಂತ್ರಿಕತೆ ಮತ್ತು ಸೈನಿಕ ವಾಸ್ತುಶಿಲ್ಪ ಇತಿಹಾಸದಲ್ಲಿ ಗಮನಾರ್ಹವಾಗಿದೆ.

ನಂತರದ ಕಾಲದಲ್ಲಿ ಕೋಟೆಯ ಗೋಡೆಗಳು ತುಂಬಾ ಎತ್ತರ ಹಾಗೂ ದಪ್ಪವಾಗಿ ಕಟ್ಟಲ್ಪಟ್ಟಿದೆ. ಕೋಟೆ ಗೋಡೆಗೆ ಬೃಹತ್ತಾದ ಬಂದೂಕುಗಳನ್ನಿಡಲು ರಚಿಸಿದ ಬಂದೂಕು ಕಿಂಡಿಗಳು, ಫಿರಂಗಿಗಳಿಂದ ರಕ್ಷಣೆ ಪಡೆಯಲು ನಿರ್ಮಿಸಲಾಗಿರುವ ಕೈಪಿಡಿ, ಗೋಡೆ, ಕೋಟೆ ಗೋಡೆಯ ರಂಧ್ರ, ತೆರೆಗೋಡೆ, ಕೊತ್ತಲಗಳು ವಿಪರೀತ ಗಾತ್ರ ಮತ್ತು ವಿಸ್ತಾರದಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ. ಇವುಗಳ ವಿಸ್ತಾರದಿಂದ ಪ್ರಕಾರವು ಹೊಸ ರೂಪವನ್ನು ಪಡೆದವು. ಕೋಟೆಯ ಬಾಗಿಲು, ಗುಪ್ತಮಾರ್ಗ, ಹೆಬ್ಬಾಗಿಲುಗಳ ಮಾರ್ಪಾಡು ಹೀಗೆ ವಿಶೇಷವಾಗಿ ಕೋಟೆಗಳ ರಚನೆಯಾಗಿದ್ದು, ಮಹತ್ವವನ್ನು ಪಡೆದಿದ್ದವು. ಅಂದರೆ ಕೋಟೆಯಿಲ್ಲದ ರಾಜನು ವಿಷರಹಿತವಾದ ಹಾವಿನಂತೆ/ಮಧರಹಿತವಾದ ಆನೆಯಂತೆ ಸುಲಭವಾಗಿ ವಶಪಡಿಸಿಕೊಂಡಂತೆ ಕೋಟೆಯನ್ನು ವಶಪಡಿಸಿಕೊಳ್ಳಬಹುದು ಎಂಬ ಅರ್ಥವನ್ನೊಳಗೊಂಡಿದ್ದು ಇವುಗಳು ಒಟ್ಟಾರೆಯಾಗಿ ಅಂದಿನ ರಾಜಕೀಯ ಹಾಗೂ ಸಾಮಾಜಿಕ ಜಲವನದಲ್ಲಿ ಅವಿಭಾಜ್ಯ ಅಂಗಗಳಾಗಿ ತಮ್ಮದೇ ಆದ ಪಾತ್ರವನ್ನು ನಿರ್ವಹಿಸಿರುವುದು ಕಂಡುಬರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಆರ್. ಶೇಷಶಾಸ್ತ್ರಿ ಹೇಳುವಂತೆ, ಕೋಟೆ ಎಂಬುದು ಅಂದಿನ ರಾಜಕೀಯ ವ್ಯವಸ್ಥೆ ಮತ್ತು ಜನತೆಯ ರಕ್ಷಣೆಯ ಭಾರವನ್ನು ಹೊತ್ತಿತ್ತು. ಕೋಟೆಯ ಬಲದ ಮೇಲೆ ಆಡಳಿತ ವ್ಯವಸ್ಥೆಯು ಅಳಿವು-ಉಳಿವು ಅವಲಂಬಿಸಿರುತ್ತಿತ್ತು ಎಂಬುದಾಗಿ ತಿಳಿಸುವುದರ ಮೂಲಕ ಕೋಟೆಯ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ.

ಕೋಟೆ ಎಂದಾಕ್ಷಣ ನಮಗೆ ನೆನಪಾಗುವುದು ಕೇವಲ ಗೋಡೆಗಳು ಮಾತ್ರ. ಆದರೆ ಕೋಟೆಯ ಗೋಡೆಯು ಸೇರಿದಂತೆ ಇತರೆ ಅನೇಕ ಅಂಥ ಭಾಗಗಳನ್ನು ಒಳಗೊಂಡಿದೆ. ಇದೊಂದು ಸೈನಿಕರಿಂದ ಕೂಡಿದ ರಕ್ಷಿತವಾದ ದೊಡ್ಡ ಸ್ಥಳ ಎಂದು ಈ ಗೋಡೆಗಳ ಜೊತೆಗೆ ಇನ್ನೂ ಹಲವಾರು ಅಂಗಾಂಗಳು ಇವೆ. ಇವುಗಳ ಬಗ್ಗೆ ಶಾಸನಾಧಾರಗಳು ವಿರಳವಾಗಿದ್ದರೂ ಸಾಹಿತ್ಯಿಕ ಗ್ರಂಥಗಳು ವಿಫುಲ ಮಾಹಿತಿಯನ್ನು ಒದಗಿಸಿವೆ.

ತಿಪ್ಪೇಸ್ವಾಮಿ ಹೇಳುವಂತೆ ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ, ೨೦೦೪ : ಶಿಲ್ಪಶಾಸ್ತ್ರದಲ್ಲಿ ಪ್ರತಿಪಾದಿಸುವಂತೆ ಕೋಟೆಯ ವಪ್ರ/ಮಣ್ಣಿನ ಇಳಿಪೋರೆ, ಕಂದಕ/ಅಗಳು, ಕೋಟೆ ತೆನೆ,

ಆಳ್ವೇರಿ/ಪ್ರಕಾರ, ಕೊತ್ತಲ/ಬುರುಜು, ಮುಗಿಲತಾಣೆ, ಕೋಟೆಯ ಬಾಗಿಲು, ಕೋಟೆಯ ಕದ, ದಿಡ್ಡಿ, ಕೋಟೆಯ ಮೇಲಿನ ಉಪಕರಣಗಳು ಮುಂತಾದ ಅಂಗಭಾಗಗಳನ್ನು ಒಳಗೊಂಡಿರುವ ಸ್ಥಳವೇ ಕೋಟೆ ಎಂಬುದಾಗಿ ಹೇಳಬಹುದಾಗಿದೆ.

**ವಪ್ರ/ಮಣ್ಣಿನ ಇಳಿವೋರೆ:** ಕೋಟೆಯಿಂದ ಇಳಿಜಾರಾಗಿರುವ ಇಳಕಲ್ಲು ಮತ್ತು ಮಣ್ಣಿನ ಇಳಿಪೊರೆಗೆ ವಪ್ರ ಎಂದು ಕರೆಯಲಾಗಿದೆ. ವಪ್ರವನ್ನು ಕೋಟೆಗೋಡೆಯ ಒಳಗೂ ಹೊರಗು ನಿರ್ಮಿಸಲಾಗುತ್ತದೆ. ಆದರೆ ಹೊರಭಾಗದಲ್ಲಿ ಸ್ವಲ್ಪ ಎತ್ತರದಲ್ಲಿ ರಚಿಸಲಾಗುತ್ತದೆ. ವಪ್ರವನ್ನು ನಿರ್ಮಿಸಲು ಆಯ್ಕೆ ಮಾಡಿದ ನಿವೇಶನದ ಸುತ್ತಲೂ ಕಂದಕವನ್ನು ತೋಡಬೇಕು. ಅಗೆಯಲ್ಪಟ್ಟ ಮಣ್ಣನ್ನು ವ್ಯರ್ಥಮಾಡದೇ ೨ ರೀತಿಯಾಗಿ ಉಪಯೋಗಿಸಿಕೊಳ್ಳಬಹುದಾಗಿದೆ. ಕಂದಕದ ಒಳ ಗೋಡೆಗೆ ಇಳಿಜಾರಾಗಿ ಎತ್ತರದ ದಿಬ್ಬವನ್ನು ನಿರ್ಮಿಸಲು ಅಗೆಯಲ್ಪಟ್ಟು ೩/೪ರಷ್ಟು ಮಣ್ಣನ್ನು ಮೇಲಿನ ಕೋಟೆಯ ಉದ್ದೇಶಕ್ಕೆ ಬಳಸಿದರೆ ಉಳಿದ ಮಣ್ಣನ್ನು ಕಂದಕದ ಹೊರಭಾಗದಲ್ಲಿ ಇಳಿಜಾರಾದ ಇಳು ಮೋರೆಗಳನ್ನು ನಿರ್ಮಿಸಲು ಬಳಸುತ್ತಿದ್ದರು. ಈ ವಪ್ರಗಳನ್ನು ನಿರ್ಮಿಸುವುದರ ಹಿಂದೆ ಹಲವು ಉದ್ದೇಶಗಳಿದ್ದವು. ಶತ್ರುಗಳು ಬಳಸಲ್ಪಟ್ಟ ಆಯುಧಗಳನ್ನು ತಡೆಯುವುದು ಮತ್ತು ಅವುಗಳನ್ನು ಹಿಂದಕ್ಕೆ ಚಿಮ್ಮುವಂತೆ ಮಾಡುವುದಾಗಿತ್ತು. ಜೊತೆಗೆ ವೈರಿಯು ಸುಲಭವಾಗಿ ಕೋಟೆಯನ್ನು ಸಮೀಪಿಸಲು ಸಾಧ್ಯವಾಗದಂತೆ ತಡೆಯುವುದು ಇದರ ಉದ್ದೇಶವಾಗಿದ್ದಿತು. ಅತಿ ಮುಖ್ಯವಾಗಿ ಶತ್ರುಗಳು ಗುಂಡುಗಳನ್ನು ಹಾರಿಸಿದಾಗ ಗುಂಡುಗಳು ನೇರವಾಗಿ ಕೋಟೆಯ ಗೋಡೆಗಳಿಗೆ ತಾಕದಂತೆ ಈ ಮಣ್ಣಿನಲ್ಲಿ ಸಿಕ್ಕಿಸಿಕೊಳ್ಳುವುದರ ಮೂಲಕ ಶತ್ರುಗಳ ಉದ್ದೇಶವನ್ನು ವಿಫಲಗೊಳಿಸುವುದಾಗಿತ್ತು. ಕೆಲವು ಕಡೆ ಈ ಇಳಿಕಲ್ಲು ಪ್ರದೇಶದಲ್ಲಿ ಮುಳ್ಳಿನ ಪೊದೆಗಳನ್ನು ವಿಫುಲವಾಗಿ ಬೆಳೆಸಿ ಅಧಿಕ ರಕ್ಷಣಾವ್ಯವಸ್ಥೆಯನ್ನು ಮಾಡಿ ಕೋಟೆಗೋಡೆ ಹಾಗೂ ಕೋಟೆಯ ಒಳಗಿನ ಪ್ರದೇಶವನ್ನು ಕಾಣದಂತೆ ಮಾಡಿರುವುದೂ ಕಂಡುಬರುತ್ತದೆ. ಈ ಎಲ್ಲ ಕಾರಣಗಳಿಂದ ವಪ್ರವು ಕೋಟೆಯ ಪ್ರಮುಖ ಅಂಗಭಾಗಗಳಲ್ಲೊಂದಾಗಿದೆ.

**ಕಂದಕ/ಅಗಳು:** ಕೋಟೆಯ ಪ್ರಮುಖ ಮತ್ತೊಂದು ಭಾಗವೆಂದರೆ ಕಂದಕವಾಗಿದೆ. ಇದನ್ನು ಅಗಳು ಪರಿಖೆ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ದುರ್ಗದ ಸುತ್ತಲೂ ಕಂದಕಗಳಿರುವ ವಿಷಯವನ್ನು ಎಲ್ಲಾ ಕವಿಗಳ ವರ್ಣನೆಯಲ್ಲಿ ಕಂಡುಬಂದಿದೆ. ತಗ್ಗಾದ ೨ ಬದಿಗಳಲ್ಲಿ ಸಡಿಲವಾದ ಮಣ್ಣನ್ನು ತೆಗೆದುಹಾಕಿ ಆ ಗೋಡೆಗಳಿಗೆ ಸ್ಥಳೀಯವಾಗಿ ಲಭ್ಯವಿರುವ ಇಟ್ಟಿಗೆ/ಕಲ್ಲುಗಳು ಕಟ್ಟಡವನ್ನು ನಿರ್ಮಿಸಲಾಗಿದೆ. ಇವುಗಳೆ ಕಂದಕಗಳಾಗಿವೆ. ಈ ಕಂದಕಗಳಿಗೆ ಕೆಲ ಸಂದರ್ಭಗಳಲ್ಲಿ ನದಿ, ಅಣೆಕಟ್ಟು, ಕೆರೆ ಮತ್ತು ಆಳವಾದ ಬಾವಿಗಳಿಂದ ನೀರಿನ ಸಂಪರ್ಕ ಕಲ್ಪಿಸಲಾಗುತ್ತಿತ್ತು. ಕೆಲವೆಡೆ ನಗರದ ಚರಂಡಿ ವ್ಯವಸ್ಥೆಗಳನ್ನು ಈ ಕಂದಕಗಳೊಂದಿಗೆ ಸಂಪರ್ಕಿಸಲಾಗಿದೆ. ಕಂದಕದ ಬುಡದ ಅಗಲಕ್ಕಿಂತ ಮೇಲ್ಭಾಗದ ಅಗಲ ಯಾವಾಗಲೂ

ಹೆಚ್ಚಾಗಿರುತ್ತದೆ. ಕೆಲವು ಕಂದಕಗಳು ಬುಡಭಾಗ ೧೫ ಮೀ. ಹಾಗೂ ಮೇಲ್ಭಾಗ ೪೦ ಮೀ. ವರೆಗೂ ವಿಸ್ತಾರವಾಗಿರುವುದನ್ನು ಕಾಣಬಹುದಾಗಿದೆ. ಇಂತಹ ಕಂದಕಗಳನ್ನು ನಿರ್ಮಿಸುವಾಗ ಸ್ಥಳದ ಆಯ್ಕೆ ಮುಖ್ಯವಾಗಿರುತ್ತದೆ. ನೈಸರ್ಗಿಕ ರಕ್ಷಣೆಯ ದೃಷ್ಟಿಯಿಂದ ನದಿಯ ದಡಗಳು ಹೆಚ್ಚು ಉಪಯುಕ್ತವಾಗಿವೆ. ಇಲ್ಲಿ ಕೋಟೆಯ ಮೇಲ್ಭಾಗದಿಂದ ಬಿಟ್ಟ ಬಾಣಗಳು ಶತ್ರುಗಳಿಗೆ ಬೇಗ ತಾಕುತ್ತವೆ. ಅಲ್ಲದೇ ಮೇಲ್ಭಾಗದಲ್ಲಿರುವ ಸೈನಿಕರಿಗೆ ರಕ್ಷಣೆ ಇರುತ್ತಿದ್ದಿತು. ಈ ದೃಷ್ಟಿಯಿಂದ ಕೋಟೆಗಳಲ್ಲಿ ಕಂದಕದ ಪಾತ್ರ ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಈ ಕಂದಕಗಳಲ್ಲಿ ನೀರು ತುಂಬಿಸಿ ವಿಷಪೂರಿತ ಹಾವು, ಮೊಸಳೆಗಳನ್ನು ಬಿಡುತ್ತಿದ್ದರಿಂದ ಶತ್ರುಗಳಿಗೆ ಒಳಪ್ರವೇಶಿಸಲು ಆಗುತ್ತಿರಲಿಲ್ಲ ಹಾಗೂ ಈ ಕಂದಕಗಳು ಕೋಟೆಯ ಸುತ್ತ ಇಟ್ಟ ವಿಷಪೂರಿತ ಕತ್ತಿಗಳನ್ನು ಇದರಲ್ಲಿ ನೆಡುತ್ತಿದ್ದರು. ಕೆಲವು ಕೋಟೆಗಳಲ್ಲಿ ಕೋಟೆಗೆ ಸಂಬಂಧಪಟ್ಟವರು ಕಂದಕವನ್ನು ದಾಟಲು ತೂಗುಸೇತುವೆ ಬಳಸುತ್ತಿದ್ದರು. ತುಂಬಾ ವ್ಯವಸ್ಥಿತವಾಗಿ ತೂಗು ಸೇತುವೆಯನ್ನು ನಿರ್ಮಾಣ ಮಾಡಿರುವುದನ್ನು ಚಿತ್ರದುರ್ಗದ ಹೊರಕೋಟೆಯ ಕಂದಕದಲ್ಲಿ ಕಾಣಬಹುದಾಗಿದೆ. ಕೋಟೆಯ ಪೂರ್ವಭಾಗದಲ್ಲಿ ಜೋಡು ಬತೇರಿಗಳ ಪಕ್ಕದಲ್ಲಿ ಇಂತಹ ಒಂದು ವ್ಯವಸ್ಥೆ ಮಾಡಿಕೊಂಡಿರುವ ಅವಶೇಷಗಳನ್ನು ಈಗಲೂ ನೋಡಬಹುದಾಗಿದೆ.

ಒಟ್ಟಾರೆಯಾಗಿ ಈ ಕಂದಕವನ್ನು ಶತ್ರುಗಳ ದಾಳಿಯನ್ನು ವಿಳಂಬಗೊಳಿಸುವುದಕ್ಕಾಗಿ ಮಾಡಿದ ತಂತ್ರೋಪಾಯವೆಂದು ಹೇಳಬಹುದಾಗಿದೆ.

**ಬುರುಜು/ಕೊತ್ತಲ:** ಹರಿಹರನು ತನ್ನ ಗಿರಿಜ ಕಲ್ಯಾಣದಲ್ಲಿ 'ವಿರಾಜಿಪಗೊಂಟು ಗೊಂಡಿನೊಳ್ ಬಳಸಿದ ಕೊತ್ತಳಂ' ಎಂಬುದಾಗಿ ತಿಳಿಸಿದ್ದಾರೆ. ಗೊಂಟ ಎಂಬುದು ಬಹುಶಃ ಕೋಟೆಯ ಗೋಡೆಗಳು ಸಂಧಿಸುವ ಸ್ಥಳ. ಅಂತಹ ಸಂಧಿ ಸ್ಥಾನಗಳಲ್ಲಿ ಅಟ್ಟಾಳೆಗಳಿಗಿಂತ ಎತ್ತರವಾಗಿ ಕಟ್ಟಿದ ವೀಕ್ಷಣ ಕೇಂದ್ರಗಳೇ ಕೊತ್ತಲಗಳು ಇವು ಕೋಟೆಯ ೪ ಅಥವಾ ೮ ದಿಕ್ಕುಗಳಲ್ಲಿಯೂ ಇರುತ್ತಿದ್ದವು ಎಂಬುದಾಗಿ ಚಿದಾನಂದಮೂರ್ತಿಯವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವನಿಯ ಹೊತ್ತ ದಿಗ್ಗಜರಂತೆ ನಿಂತ ಕೊತ್ತಲಗಳು ಒಪ್ಪಿದವು ಎಂಬ ಮಾತು ದಿಕ್ಕಿಗೆ ಒಂದು ಕೊತ್ತಲವಿದ್ದ ಬಗೆಗೆ ಮಾಹಿತಿ ನೀಡುತ್ತದೆ. ಹೀಗೆ ಒಂದೊಂದು ದಿಕ್ಕಿನಲ್ಲಿ ಕೋಟೆ ಗೋಡೆಗೆ ಕೊತ್ತಲವಿದ್ದ ಬಗ್ಗೆ ಅನೇಕ ಕಾವ್ಯಗಳಲ್ಲಿ ಸ್ಪಷ್ಟಪಡಿಸಲಾಗಿದೆ. ಹೆಬ್ಬಾಗಿಲುಗಳ ಕೊತ್ತಲಗಳು ಕಾವಲು ಗೃಹಗಳಾಗಿಯೂ ಕೆಲಸ ಮಾಡುತ್ತಿದ್ದವು. ಇವುಗಳು ಅರ್ಧವೃತ್ತಾಕಾರಗಿಯೂ ಕೆಲವು ವೇಳೆ ಚೌಕಾಕಾರವಾಗಿಯೂ ನಿರ್ಮಿಸಿರುವುದನ್ನು ಕಾಣುತ್ತೇವೆ. ಈ ಬುರುಜುಗಳಿಂದ ಕೋಟೆಗೆ ಭದ್ರತೆ ಒಂದು ಕಡೆಯಾದರೆ ವಿಶಾಲವಾದ ಪ್ರದೇಶವನ್ನು ಆವರಿಸುವಂತಹ ಬಂದೂಕು ಕೋವಿಗಳನ್ನು ಸೇರಿಸಿಕೊಂಡು ಶತ್ರುಗಳನ್ನು ನಿಗ್ರಹಿಸಲು ಉಪಯೋಗಿಸಲಾಗುತ್ತಿತ್ತು. ಅರ್ಧ ವೃತ್ತಾಕಾರದ ಬುರುಜುಗಳಂತೆಯೇ ಅನೇಕ ವರ್ತುಲಗಳನ್ನು

ಬುರುಜುಗಳನ್ನು ನಿರ್ಮಿಸಲಾಗುತ್ತಿತ್ತು. ವೃತ್ತಕಾರಾದ ಬುರುಜುಗಳು ವಿಸ್ತಾರವಾದ ಪ್ರದೇಶಗಳ ಮೇಲೆ ಹತೋಟಿ ಹೊಂದಲು ಉಪಯೋಗಿಸುತ್ತಿದ್ದರು. ಉದಾ: ಚಿತ್ರದುರ್ಗದ ಬಸವನ ಬುರುಜು, ಇಂತಹ ಬುರುಜುಗಳಿಂದ ಕೋಟೆಯ ಸುತ್ತಲಿನ ಪ್ರದೇಶವನ್ನು ವೀಕ್ಷಿಸಬಹುದಾಗಿದೆ. ಈ ಕಾವಲು ಬುರುಜುಗಳಲ್ಲಿ ವೀಕ್ಷಣಾ ಕಿಂಡಿಗಳಿವೆ. ಮತ್ತೆ ಕೆಲವು ಬುರುಜುಗಳಲ್ಲಿ ಆಯಾತಕಾರದ ದೊಡ್ಡ ಕಿಂಡಿಗಳಿದ್ದು ಅಲ್ಲಿ ಫಿರಂಗಿಗಳನ್ನು ಇಡಬಹುದಾಗಿದೆ. ಕಾವಲುಗಾರರು/ಸೈನಿಕರು ಇದರ ಮೇಲೆ ನಿಂತು ಶತ್ರುಗಳನ್ನು ನಾಶಪಡಿಸುತ್ತಿದ್ದರು. ಸಾಮಾನ್ಯವಾಗಿ ಇಂತಹ ಬುರುಜುಗಳಲ್ಲಿ ತೀಕ್ಷ್ಣವಾದ ಯೋಧರು ಇರುತ್ತಿದ್ದರು. ಒಟ್ಟಿನಲ್ಲಿ ಕೊತ್ತಲಗಳು ಶತ್ರುಗಳಿಗೆ ಅಪಾಯವನ್ನುಂಟು ಮಾಡುವ ಸ್ಥಳಗಳಾಗಿದ್ದವು.

ಕಲ್ಲುಗಳ ಅಂಚುಗಳು ಒಂದಕ್ಕೊಂದು ಸರಿಯಾಗಿ ಹೊಂದಿಕೊಳ್ಳದೇ ಉಂಟಾದ ಸಂಧಿಗಳಲ್ಲಿ ಚಕ್ಕೆ ಕಲ್ಲುಗಳನ್ನು ಉಪಯೋಗಿಸಿದ್ದಾರೆ. ಕಲ್ಲುಗಳ ಮಧ್ಯೆ ಕೆಸರು ಮಣ್ಣನ್ನು ಸೇರಿಸಿ ಗೋಡೆ, ನಿರ್ಮಿಸಿರುವುದು ಕಂಡುಬರುತ್ತದೆ. ಬೋಡುಮಟ್ಟಿ ದಿನ್ನೆ ಮತ್ತು ನೆಲ್ಲಿಕಾಯಿ ಸಿದ್ದಪ್ಪನ ದೇವಾಲಯದ ಪಕ್ಕದಲ್ಲಿರುವ ಕೋಟೆಗೋಡೆಗೆ ಕೋಟೆ ಕಿಂಡಿಗಳಿವೆ. ಇವು ಇಡೀ ಬೆಟ್ಟದ ಪ್ರಾಚೀನ ಕೋಟೆಗೋಡೆಗಳಾಗಿವೆ.

ಚಿನ್ಮೂಲಾದ್ರಿ ಗಿರಿಸ್ತೋಮವು ಅನತಿ ದೂರದಲ್ಲಿ ಇಂಗಳದಾಳು, ಕುಂಚಿಗನಹಳ್ಳಿ, ಮದಕರಿಪುರ, ಗೋನೂರು ಗುಡ್ಡದ ರಂಗವ್ವನಹಳ್ಳಿ, ತಮ್ಮಟಕಲ್ಲು ಮುಂತಾದ ಕಣಿವೆಗಳನ್ನು ಹೊಂದಿರುವ ಗುಡ್ಡದ ಸಾಲುಗಳು ಚಿತ್ರದುರ್ಗಕ್ಕೆ ಪ್ರಕೃತಿ ನಿರ್ಮಿತ ಕೋಟೆಗಳಂತಿವೆ. ಈ ಎಲ್ಲ ಕಣಿವೆ ಪ್ರದೇಶಗಳ ಮಧ್ಯೆ ಮಧ್ಯೆ ಕೋಟೆ ಕಟ್ಟಿದ್ದಾರೆನ್ನಲಾಗಿದ್ದು, ಈಗ ಈ ಭಾಗದಲ್ಲಿ ವಿಸ್ತಾರವಾದ ಆಧುನಿಕ ರಸ್ತೆಗಳು ಚಿತ್ರದುರ್ಗಕ್ಕೆ ಪ್ರವೇಶ ಕಲ್ಪಿಸಿರುವುದರಿಂದ ಮತ್ತು ಕಣಿವೆ ಪ್ರದೇಶಗಳಲ್ಲಿ ಗ್ರಾಮಗಳು ನಿರ್ಮಾಣಗೊಂಡಿರುವುದರಿಂದ ಕೋಟೆಯು ಕೆಲವು ಕಡೆ ಈಗಲೂ ಈ ಕೋಟೆಯ ಅವಶೇಷಗಳನ್ನು ಕಾಣಬಹುದು. ಇದರಂತೆ ಚಿತ್ರದುರ್ಗದ ವಾಯವ್ಯ ದಿಕ್ಕಿನಲ್ಲಿರುವ ಚೋಳದಗುಡ್ಡ, ಸಣ್ಣಕಿರುಬನಕಲ್ಲು, ದೊಡ್ಡ ಕಿರುಬನಕಲ್ಲುಗಳ ಮಧ್ಯೆ ಮಧ್ಯೆ ಕೋಟೆಕಲ್ಲಿನ ಅವಶೇಷಗಳಿವೆ. ಈ ಕೋಟೆಯು ದಕ್ಷಿಣಕ್ಕೆ ಮುಂದುವರೆದಂತೆ ಸಾಗಿ ಅಲ್ಲಿಂದ ನೈರುತ್ಯದ ಕಡೆಯವರೆಗೂ ಇದೆ. ಇಲ್ಲಿ ಪುನಃ ದಕ್ಷಿಣದಲ್ಲಿರುವ ಚಂದ್ರವಳ್ಳಿಯನ್ನು ಒಳಸಿಕೊಂಡು ಅಂಕಲಿ ವಾಡದವರೆಗೂ ಸಾಗಿದೆ. ಚಂದ್ರವಳ್ಳಿಯ ಪಶ್ಚಿಮಕ್ಕೆ ಬೋಡಮಟ್ಟಿಯ ದಿನ್ನೆಯ ಮೇಲೆ ವಿಸ್ತಾರವಾದ ೮ ಅಡಿ ಎತ್ತರ ಹಾಗೂ ೪ ಅಡಿ ಅಗಲದ ಕೋಟೆಯ ಸಾಲು ಇದೆ. ಈ ಕೋಟೆಯ ಸಾಲುಗಳಲ್ಲಿ ಕೋವಿ ಕಿಂಡಿಗಳಿವೆ. ಇದಕ್ಕೆ ಸಂಬಂಧಿಸಿದಂತೆ ಲಕ್ಷ್ಮಣ್ ತೆಲಗಾವಿಯವರನ್ನು ಸಂದರ್ಶಿಸಿದಾಗ ಇದು ಕೆಂಪಯ್ಯನ ಕೋಟೆ ಎಂಬುದಾಗಿ ಮಾಹಿತಿ ನೀಡಿದರು. ಕೆಂಪಯ್ಯನ ಕೋಟೆಯಿಂದ ಸು. ೧ ಕಿ.ಮೀ. ದೂರದವರೆಗೂ ಕೋಟೆಯ ಸಾಲು ಮುಂದುವರೆದಿದ್ದು,

ಇದು ನಂತರ ಕಂಡುಬರುವುದಿಲ್ಲ. ಇದಕ್ಕೆ ಹೊಂದಿಕೊಂಡಂತೆ ಇತ್ತೀಚೆಗೆ ಅರಣ್ಯ ಇಲಾಖೆಯವರು ತಡೆಗೋಡೆಯನ್ನು ನಿರ್ಮಿಸಿದ್ದಾರೆ.

**ಏಳುಸುತ್ತಿನ ಕೋಟೆ**

ಚಿತ್ರದುರ್ಗ ಕೋಟೆಯು ಒಂದು ಅಬೇಧ್ಯವಾದ ಕೋಟೆಯಾಗಿದ್ದು, ಚಿತ್ರದುರ್ಗದ ಕೋಟೆ ಎಂದ ಕೂಡಲೆ ಸಹಜವಾಗಿ ಪಾಳೆಯಗಾರರು ಕಟ್ಟಿಸಿದ ಕೋಟೆ ಎಂದುಕೊಳ್ಳುತ್ತೇವೆ. ಆದರೆ ಪಾಳೆಗಾರರಿಗಿಂತಲೂ ಮೊದಲು ಇಲ್ಲಿ ಆಳ್ವಿಕೆ ನಡೆಸುತ್ತಿದ್ದವರಿಂದಲೂ ಕೋಟೆಗಳು ಕಟ್ಟಲ್ಪಟ್ಟಿದೆ ಎಂಬುದು ಹಾಗೂ ಇಲ್ಲಿ ಕ್ರಿ.ಶ. ೧೦೭೦ರಲ್ಲಿಯೇ ಕೋಟೆ ಇದ್ದುದಕ್ಕೆ ಆಧಾರಗಳಿವೆ.

ಜನಪದರ ವರ್ಣನೆಯಲ್ಲಿ ಕೋಟೆಗಳನ್ನು ರಾಜರನ್ನು ನಾನಾ ವಿಧದಲ್ಲಿ ಹೋಲಿಸಿ ಪದ್ಯ ಕಟ್ಟಿರುವುದುಂಟು. ಅದರಲ್ಲಿಯೂ ಚಿತ್ರದುರ್ಗದ ಕೋಟೆ ಎಂದಾಕ್ಷಣ ಎದೆ ನಡುಗಿಸುವಂತಹ ವಿಚಾರವಾಗಿದೆ. ಭೂಮಿಗೂ ಬಾನಿಗೂ ಜೋಡಣೆ ಇದ್ದಂತೆ ಇರುವ ಈ ಕೋಟೆಯ ಸರಪಳಿಯಂತೆ ಹೊಂದಿಸಲಾಗಿದೆ. ಈ ಕೋಟೆಯ ಒಂದು ವಿಶೇಷತೆಯೆಂದರೆ ಏಳು ಸುತ್ತುಗಳಿರುವುದು ಹಾಗೂ ಏಳುಸುತ್ತಿಗೂ ಒಂದೊಂದು ಹೆಸರನ್ನು ನೀಡುತ್ತಾ ಬಂದಿದ್ದಾರೆ. ಬಹುಶಃ ಈ ವ್ಯವಸ್ಥೆಯ ಎಪ್ಪತ್ತೇಳು ಪಾಳೆಯಗಾರರು ಎಂಬ ಬಿರುದನ್ನು ಹೊಂದಿರುವ ಈ ನಾಯಕರಸರು ಏಳು ಕೋಟೆಯನ್ನು ಕಟ್ಟಿಸಿರಬಹುದಾಗಿದೆ. ಈ ಕೋಟೆಯ ಅಧ್ಯಯನಕ್ಕೆ ಲಕ್ಷ್ಮಣ್ ತೆಲಗಾವಿಯವರನ್ನು ವಿಚಾರಿಸಿದಾಗ ಅದು ಒಂದು ಸಮುದ್ರವಿದ್ದಂತೆ, ಅದು ಕೈಗೆ ನಿಟುಕದು ಎಂಬುದಾಗಿ ಹೇಳಿ ಕೋಟೆಯ ಮಾಹಿತಿಯನ್ನು ನೀಡಿದರು. ಇಂತಹ ಬಲಿಷ್ಠ ಕೋಟೆಯಲ್ಲಿ ಕಾಮನಬಾಗಿಲು ಕಸ್ತೂರಿ ರಂಗಪ್ಪನಾಯಕನ ಬಾಗಿಲು, ಕೆಂಪಯ್ಯನ ಕೋಟೆ, ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟದ ಕೋಟಸಾಲು, ಹೊರಕೋಟೆಯ ಸುತ್ತು ಗಾರೆಬಾಗಿಲಿನ ಕೋಟೆಸುತ್ತು, ಜಾಗಟೆ ಬಾಗಿಲು ಕೋಟೆಸುತ್ತು, ಗಂಟೆಬಾಗಿಲು ಕೋಟೆಸುತ್ತ, ಟೀಕಿನಬಾಗಿಲು, ಏಕನಾಥೇಶ್ವರಿ ಕೋಟೆಸುತ್ತು ಇವುಗಳನ್ನೆಲ್ಲ ನೋಡಿದಾಗ ಚಿತ್ರದುರ್ಗದ ಕೋಟೆಯು ಇತರೆ ಯಾವುದೇ ಕೋಟೆಗಳಿಗಿಂತ ಕಡಿಮೆಯದೇನಾಗಿರಲಿಲ್ಲ. ಕೋಟೆಯಲ್ಲಿ ಕಂಡುಬರುವಂತಹ ದೇವಾಲಯಗಳ ವಾಸ್ತುಶಿಲ್ಪಶೈಲಿ ವಿಭಿನ್ನವಾಗಿವೆ. ಈ ಒಂದು ಅಧ್ಯಯನದಲ್ಲಿ ಕೋಟೆಗೆ ಇರುವಂತಹ ಇನ್ನಿತರೆ ಹೆಸರುಗಳು, ಕೋಟೆಯ ಅಕ್ಷಾಂಶ, ರೇಖಾಂಶ, ಕೋಟೆಯು ಯಾವ ವರ್ಗಕ್ಕೆ ಸೇರಿದೆ. ಕೋಟೆಯ ಕಾಲ ಮತ್ತು ಸ್ಥಿತಿ, ಮುಂತಾದವುಗಳನ್ನು ಅಧ್ಯಯನಿಸಲಾಗಿದ್ದು, ಬತೇರಿಗಳಿಗೆ ವಿಶೇಷವಾದ ಮಾನ್ಯತೆಯನ್ನು ಕೋಟೆಯೊಳಗೆ ನೀಡಿರುವುದನ್ನು ಕಾಣಬಹುದಾಗಿದೆ. ಇವುಗಳನ್ನು ಸಹ ಒಂದೊಂದು ಬತೇರಿಗೆ ಒಂದೊಂದು ಹೆಸರಿನಿಂದ ಕರೆಯಾಗುತ್ತಿದ್ದಿತು. ಚಿತ್ರದುರ್ಗದ ಪಾಳೆಯಗಾರರು ಈ ಎಲ್ಲಾ ಗುಡ್ಡಗಳನ್ನು ಒಳಗೊಂಡಂತೆ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸುತ್ತಿದ್ದ

ಸಂದರ್ಭದಲ್ಲಿ ಈ ಬತ್ತೇರಿಗಳ ಮೇಲಿನಿಂದ ಸಂಪರ್ಕವನ್ನು ಕಲ್ಪಿಸಿಕೊಂಡಿದ್ದಾರೆನ್ನಬಹುದಾಗಿದೆ. ಹಾಗೂ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ರಾಜಶೇಖರಪ್ಪ ಬಿ., ಮೀರಸಾಬೀಹಳ್ಳಿ ಶಿವಣ್ಣ (೧೯೯೯), ಗಿರಿಜ ಟಿ. (೧೯೯೧), ಲಕ್ಷ್ಮಣ್ ತೆಲಗಾವಿ (೧೯೮೦), ಕರೀಗೌಡ ಬೀಚನಹಳ್ಳಿ (೨೦೦೦), ರಾಮಚಂದ್ರರಾವ್ (೧೯೭೫), ಶ್ರೀನಿವಾಸ ಎಂ.ವಿ. (೨೦೦೧), ತಿಪ್ಪೇಸ್ವಾಮಿ ಎಂ.ಎಸ್. (೨೦೦೪), ಮಂಜುನಾಥರಾವ್ (೧೯೭೯), ಲಕ್ಷ್ಮಣ್ ತೆಲಗಾವಿ (೧೯೭೭), ಜೋಶಿ ಎಸ್.ಕೆ. (೨೦೦೦), ಕೃಷ್ಣಭಟ್ (೧೯೭೨), ಶ್ರೀಧರಮೂರ್ತಿ (೧೯೭೨), ಪುರುಷೋತ್ತಮ ಬಿಳಿಮಲೆ (೨೦೦೪), ರಾಜಶೇಖರಪ್ಪ ಬಿ. (೧೯೯೫), ಶಕುಂತಲಾ ಎನ್. (೨೦೦೯) ಮುಂತಾದವರ ಬರಹ ಮತ್ತು ಆಕರಗಳನ್ನು ಬಳಸಿಕೊಂಡು ಈ ಅಧ್ಯಯನವನ್ನು ರೂಪಿಸಲು ಪ್ರಯತ್ನಿಸಲಾಗಿದೆ. ಮತ್ತು ೧.ಒಂದನೇ ಸುತ್ತಿನ ಕೋಟೆ ೨. ಎರಡನೇ ಸುತ್ತಿನ ಕೋಟೆ ೩. ಮೂರನೇ ಸುತ್ತಿನ ಕೋಟೆ ೪. ನಾಲ್ಕನೇ ಸುತ್ತಿನ ಕೋಟೆ ೫. ಐದನೇ ಸುತ್ತಿನ ಕೋಟೆ ೬. ಆರನೇ ಸುತ್ತಿನ ಕೋಟೆ ೭. ಏಳನೇ ಸುತ್ತಿನ ಕೋಟೆ ೮. ದ್ವಾರಬಾಗಿಲುಗಳು ೯. ಬುರುಜು ಮತ್ತು ಕಂದಕಗಳು ೧೦.ಕಾವಲು ಗೋಪುರಗಳು ೧೧. ಗರಡಿ ಮನೆಗಳು ೧೨. ಮದ್ದಿನ ಮನೆ ೧೩. ಕಣಜ ಮತ್ತು ಸೈನಿಕ ವಸತಿ ನಿಲಯಗಳು ೧೪. ನೀರಿನ ಆಶ್ರಯ ತಾಣಗಳು ೧೫. ಕೋಟೆಯ ಭಿತ್ತಿ ಚಿತ್ರಗಳು ೧೬. ಮೌಖಿಕ ಸಾಹಿತ್ಯದಲ್ಲಿ ಕೋಟೆಯ ಚಿತ್ರಣ, ಇವುಗಳ ಬಗ್ಗೆ ಮುಂದಿನ ಸಾಲುಗಳಲ್ಲಿ ವಿವರಿಸಲಾಗಿದೆ.

**ಒಂದನೇ ಸುತ್ತಿನ ಕೋಟೆ**

ತಿಪ್ಪೇಸ್ವಾಮಿಯವರು ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ, ೨೦೦೪ ಎನ್ನುವ ಲೇಖನದಲ್ಲಿ ಪ್ರಕಾರ ಚಿತ್ರದುರ್ಗದ ಏಳು ಸುತ್ತಿನ ಕೋಟೆಗಳಲ್ಲಿ ಮೊದಲನೇ ಸುತ್ತು ಮೇಲುದುರ್ಗವನ್ನು ಆವರಿಸಿಕೊಂಡಿದೆ. ಈ ಒಳಸುತ್ತಿನ ಕೋಟೆಗೆ ಹಿಡಿಂಬೇಶ್ವರ, ಗರುಡಾಂಜನೇಯ, ನಾಗತಿ ಮತ್ತು ನರಸಿಂಹನ ಬಾಗಿಲುಗಳಿವೆ. ಮೇಲುದುರ್ಗದ ಅಧಿದೇವತೆಯಾದ ಏಕನಾಥೇಶ್ವರಿ ದೇವಾಲಯದ ಮುಂಭಾಗ. ಕೆಳಗಿನ ತಗ್ಗು ಪ್ರದೇಶದಲ್ಲಿ ಈ ಕೋಟೆಯ ಸಾಲಿಗೆ ಮಹಾದ್ವಾರವಿದೆ. ದೇವಾಲಯದ ಮುಂದೆ ಈ ಬಾಗಿಲು ಇರುವುದರಿಂದ ಇದನ್ನು ಏಕನಾಥೇಶ್ವರಿ ಬಾಗಿಲು ಅಥವಾ ಅಜ್ಜಿಯ ಬಾಗಿಲು ಎಂದು ಕರೆಯುತ್ತಾರೆ. ಪಾಳೆಯಗಾರರ ದಾಖಲೆಗಳ ಪ್ರಕಾರ ೩ನೇ ಕಸ್ತೂರಿ ರಂಗಪ್ಪ ನಾಯಕನು ಈ ಬಾಗಿಲನ್ನು ನಿರ್ಮಿಸಿದನೆಂದು ಹೇಳಲಾಗಿದೆ. ಇದು ೬ x ೭.೬ x ೧೧ ಅಡಿಗಳಲ್ಲಿ ನಿರ್ಮಾಣವಾಗಿರುವ ಬಾಗಿಲಿನ ಕೋಟೆಯ ಸುತ್ತ ೨೩ ಅಡಿ ಎತ್ತರವಿದೆ. ದೇವಾಲಯದ ಮುಂದೆ ಇರುವ ವೇದಿಕೆಯಿಂದ ಹೊರಗಿನವರೆಗೆ ಈ ದ್ವಾರವು ಗೋಚರಿಸುವುದಿಲ್ಲ. ದ್ವಾರದ ಒಳಭಾಗದಲ್ಲಿ ಎರಡೂ ಕಡೆ ಪಹರೆ ದುರ್ಗಗಳಿವೆ. ಮೇಲ್ಭಾಗದಲ್ಲಿ ರಕ್ಷಣಾ ವೇದಿಕೆಯಿದೆ. ಈ ದ್ವಾರದಿಂದ ಬಲಭಾಗಕ್ಕೆ ಇರುವ ಕೋಟೆಯ ಸಾಲು ಹಿಡಿಂಬೇಶ್ವರ

ಬೆಟ್ಟದವರೆಗೆ ಸಾಗಿದೆ. ನಂತರ ಹಿಡಿಂಬೇಶ್ವರ ಮತ್ತು ಶಿವಾಲಯ ಬೆಟ್ಟಗಳನ್ನು ಕೋಟೆಯ ಸುತ್ತ ಬೆಸೆದುಕೊಂಡಿದೆ. ಶಿವಾಲಯದ ಬೆಟ್ಟದ ಶ್ರೇಣಿಗಳು ಕಹಳೆಯ ಬೆಟ್ಟದವರೆಗೂ ಚಾಚಿಕೊಂಡಿದ್ದು, ಇವೆರಡು ಬೆಟ್ಟಗಳ ಮಧ್ಯದಲ್ಲಿ ಕೋಟೆಯನ್ನು ನಿರ್ಮಾಣ ಮಾಡಲಾಗಿದೆ. ಮುಂದೆ ಈ ಸುತ್ತು ಲಾಲ್‌ಬತೇರಿ ಮತ್ತು ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟದವರೆಗೆ ಸಾಗಿದೆ. ಒಳಸುತ್ತಾ ಗೋಪಾಲಸ್ವಾಮಿಯ ದೇವಾಲಯವನ್ನು ಒಳಸಿ ತಣ್ಣೀರು ದೋಣೆ ಬೆಟ್ಟದ ಬದಿಯಲ್ಲಿ ಸಾಗುತ್ತದೆ (ತಿಪ್ಪಣ್ಣ ಮರಿಕುಂಟೆ, ೧೯೭೯:೮೬). ಈ ಕೋಟೆಯ ಸಾಲು ಭೀಮನಕಲ್ಲು ಬೆಟ್ಟವನ್ನು ಬಳಸಿಕೊಂಡು ಝುಂಡಾ ಬತೇರಿ ಬೆಟ್ಟದಿಂದ ಪುನಃ ಏಕನಾಥೇಶ್ವರಿ ಮಹಾದ್ವಾರಕ್ಕೆ ಸೇರಿಕೊಂಡಿದ್ದು, ಈ ಮೊದಲನೇ ಸುತ್ತಿನ ಮಧ್ಯ ಭಾಗದಲ್ಲಿ ಅತ್ಯಂತ ಪ್ರಮುಖವಾದ ಸ್ಮಾರಕಗಳಿದ್ದು, ಸುತ್ತಲೂ ವಿಶೇಷವಾದ ರಕ್ಷಣಾ ವ್ಯವಸ್ಥೆಯನ್ನು ನಿರ್ಮಿಸಲಾಗಿದೆ. ಏಕನಾಥೇಶ್ವರಿ ದೇವಾಲಯದ ಮುಂದೆ ಬೃಹತ್ ದೀಪಸ್ತಂಭಗಳಿವೆ. ಈ ದೀಪಸ್ತಂಭಗಳು ೪೦ ಅಡಿ ಎತ್ತರವಾಗಿದ್ದು, ಸ್ತಂಭದ ಬುಡದಲ್ಲಿ ಪೂರ್ವ ದಿಕ್ಕಿಗೆ ಕನಕಮ್ಮನಾಗತಿ, ಹಾಗೂ ಉತ್ತರ ಪಾರ್ಶ್ವದಲ್ಲಿ ಗುಡ್ಡದ ಮದಕರಿ ನಾಯಕನ ಉಬ್ಬು ಶಿಲ್ಪಗಳಿವೆ. ಈ ಸ್ತಂಭದ ಮೇಲಿನ ದ್ವೀಪವು ಏಕನಾಥೇಶ್ವರಿ ದೇವಾಲಯಕ್ಕೆ ಕಾಣುತ್ತದೆ. ಈ ಸ್ತಂಭದ ಮೇಲ್ಮೈ ೧೯ ಮುಖಗಳಿಂದ ಕೂಡಿದ್ದು ಇದರ ಮೇಲೇರಲು ಸಾಧ್ಯವಾಗುವಂತೆ ಒಟ್ಟು ೩೧ ಕಲ್ಲು ಹಿಡಿಕೆಗಳನ್ನು ಕೆತ್ತಿದ್ದಾರೆ. ಐತಿಹ್ಯದಲ್ಲಿ ಈ ಸ್ತಂಭ ಕಂಬದಮ್ಮ ಎಂದು ಕರೆಯಲಾಗಿದೆ. ಇದರ ಪಾರ್ಶ್ವದಲ್ಲಿ ನವಿಲು ಉಯ್ಯಾಲೆ ಕಂಬಗಳಿವೆ. ಈ ಸ್ಮಾರಕಗಳನ್ನು ಎರಡನೇ ಮದಕರಿ ನಾಯಕನ ಕಾಲದಲ್ಲಿ ಫ್ರಾನ್ಸ್ ದೇಶದ ತಂತ್ರಜ್ಞನಾದ ಜಾನ್ ಎಂಬುವವನು ತನ್ನ ಸಾಹಸದಿಂದ ಒಂದೇ ದಿನದಲ್ಲಿ ನಿಲ್ಲಿಸಿದನೆಂದು ಹೇಳಲಾಗಿದೆ. ಇವುಗಳಲ್ಲದೆ ಓಕುಳಿ ಹೊಂಡ, ಸಿಡಿಕಟ್ಟೆ, ೩೦೦ x ೧೪೫ ಅಡಿಗಳ ವಿಸ್ತಾರವಾದ ೮ ಅಡಿ ಆಳದ ಹಗೇವು ಗೋಪೆನಾಯಕನ ಗರಡಿ ಮುಂತಾದ ಸ್ಮಾರಕಗಳಿವೆ. ಏಕನಾಥೇಶ್ವರಿ ದೇವಾಲಯದ ಎದುರಿಗೆ ಸ್ವಲ್ಪ ಅಂತರದಲ್ಲಿ ಇರುವ ಮಹಾದ್ವಾರಕ್ಕೆ ಹಿಡಂಬನಾಥ ಬಾಗಿಲು ಅಥವಾ ಭೂತನಾಥ ಬಾಗಿಲೆಂದು ಕರೆಯುತ್ತಾರೆ. ೬ x ೭, ೫ x ೧೧ ಅಡಿಗಳಲ್ಲಿ ನಿರ್ಮಾಣವಾಗಿರುವ ಈ ಬಾಗಿಲಿನ ಬಳಿ ಹಿಡಿಂಬೇಶ್ವರ ದೇವಾಲಯವಿದೆ. ದೇವಾಲಯದ ಮುಂಭಾಗದಲ್ಲಿ ಮಂಟಪಗಳಿವೆ. ಇವು ಬೆಟ್ಟದ ಸ್ಮಾರಕಗಳಲ್ಲಿ ಅತ್ಯಂತ ಸುಂದರವಾಗಿದ್ದು, ಇವುಗಳನ್ನು ವಿಜಯನಗರದ ಅರಸರ ಒಂದನೆಯ ದೇವರಾಯನ ಮಗ ಮಲ್ಲಣ್ಣ ಒಡೆಯನು ಕ್ರಿ.ಶ. ೧೪೧೧ರಲ್ಲಿ ನಿರ್ಮಿಸಿದನೆಂದು ಹೇಳಲಾಗಿದೆ. ಇವುಗಳ ಮುಂಭಾಗದಲ್ಲಿ ಉಯ್ಯಾಲೆ ಕಂಬ ಮತ್ತು ದೀಪಸ್ತಂಭವಿದೆ. ಗೋಪಾಲಸ್ವಾಮಿ ದೇವಾಲಯದ ಹಿಂಭಾಗ ಕೋಡುಗಲ್ಲುಗಳ ಮಧ್ಯೆ ಚೋಕಂಡಿ ಹಾಗೂ ಸೈಸಿಕರ ಮನೆ ಇದೆ. ಇದರ ಸಮೀಪದಲ್ಲಿಯೇ ಕೆಳಗೋಟೆಗೆ ಹೋಗಲು ಸುರಂಗ ಮಾರ್ಗವಿದೆ. ಸುರಂಗ ಮಾರ್ಗಕ್ಕೆ ೯ ಅಡಿ ಉದ್ದ ೩ ಅಡಿ ದಪ್ಪದ ೧೫ ಚಪ್ಪಡಿ ಕಲ್ಲುಗಳನ್ನು ಬಳಸಿ

ಸುರಂಗವನ್ನು ನಿರ್ಮಿಸಿದ್ದಾರೆ. ಈ ಸುರಂಗ ಮಾರ್ಗವು ೯ ಮೀ. ಉದ್ದವಿದ್ದು, ೬.೫. ಅಡಿ ಎತ್ತರವಾಗಿದೆ. ಈ ಸುತ್ತಿನ ಗೋಡೆಯು ೫೦ ಅಡಿ ಎತ್ತರವಾಗಿದ್ದು, ೯ ಮೀಟರ್ ಅಗಲವಾಗಿದೆ. ಈ ಗೋಡೆಗೆ ೧೬ x ೧೦೨ ಇಂಚಿನ ದಪ್ಪ ಕಲ್ಲುಗಳನ್ನು ಬಳಸಿ ವ್ಯವಸ್ಥಿತವಾದ ಕೋಟೆಯನ್ನು ಕಟ್ಟಲಾಗಿದೆ. ಮೇಲ್ಭಾಗವನ್ನು ಮೆಟ್ಟಿಲುಗಳ ರೀತಿಯಲ್ಲಿ ಗಾರೆಗಚ್ಚಿನಿಂದ ಭದ್ರಗೊಳಿಸಿದ್ದಾರೆ. ಈ ಕೋಟೆಗೋಡೆಯು ನೆಲ್ಲಿಕಾಯಿ ಸಿದ್ಧಪ್ಪನ ಬೆಟ್ಟದಿಂದ ಸಿಹಿ ನೀರು ಹೊಂಡದವರೆಗೂ ಮುಂದುವರೆಯುತ್ತದೆ. ಒನಕೆ ಕಿಂಡಿಯಿಂದ ನೆಲ್ಲಿಕಾಯಿ ಸಿದ್ಧಪ್ಪನ ಬೆಟ್ಟದವರೆಗೂ ಇರುವ ಕೋಟೆಯ ಸಾಲನ್ನು ನಾಗರಸುತ್ತ ಎಂದು ಕರೆಯುತ್ತಾರೆ. ಈ ಕೋಟೆ ಗೋಡೆಯು ಹಾವಿನ ನಾಲಿಗೆಯಾಕಾರದಲ್ಲಿರುವುದರಿಂದ ಈ ಹೆಸರು ಬಂದಿದೆ. ಕೋಟೆ ಗೋಡೆಯ ಮೇಲಿರುವ ಗಾರೆಗಚ್ಚಿನ ರಚನೆಗಳು ಮೆಟ್ಟಿಲುಗಳಂತಿದ್ದು, ಮಳೆಯ ನೀರಿನಿಂದ ಕೋಟೆಗೆ ದಕ್ಕೆಯಾಗದಂತೆ ಸಂರಕ್ಷಿಸಿವೆ. ಅಲ್ಲದೆ ಈ ರಚನೆಯು ಕೋಟೆಗೋಡೆಯ ಸೌಂದರ್ಯವನ್ನು ಹೆಚ್ಚಿಸಿವೆ.

ತುಪ್ಪದಕೊಳ ಬೆಟ್ಟ ಮತ್ತು ತಣ್ಣೀರು ದೋಣೆ ಬೆಟ್ಟಗಳ ಮಧ್ಯೆ ಇರುವ ಕೋಟೆಗೋಡೆಗೆ ದ್ವಾರವನ್ನು ಕಲ್ಪಿಸಲಾಗಿದೆ. ೫.೪ x ೭.೬ x ೧೧ ಅಡಿಗಳಲ್ಲಿ ನಿರ್ಮಿಸಿರುವ ಈ ದ್ವಾರವನ್ನು ಗರುಡಾಂಜನೇಯ ಬಾಗಿಲೆಂದು ಕರೆಯುತ್ತಾರೆ. ಈ ಬಾಗಿಲ ಕೋಟೆಗೋಡೆಯು ೨೩ ಅಡಿ ಎತ್ತರವಾಗಿದ್ದು, ಇದರ ಮೇಲ್ಭಾಗದಲ್ಲಿ ೬ ಅಡಿ ಎತ್ತರದ ಮಣ್ಣಿನ ಕೋಟೆಯನ್ನು ರಚಿಸಲಾಗಿದೆ. ಗೋಡೆಯ ಹಿಂಭಾಗ ೨-೩ ಅಡಿ ಅಗಲದ ಅಟ್ಟಾಲವಿದೆ. ಇದರ ಮುಂಭಾಗ ಅಕ್ಕ ತಂಗಿ ಹೊಂಡಗಳಿವೆ. ಅಕ್ಕನ ಹೊಂಡದ ಮಧ್ಯಭಾಗದಲ್ಲಿ ಅನ್ನಪೂರ್ಣೇಶ್ವರಿಯ ಕಲ್ಲುಗುಡಿ ಇದೆ. ಹೊಂಡದ ಮೇಲ್ಭಾಗದಲ್ಲಿ ನಾಗಲಿಂಗೇಶ್ವರ ಗುಡಿ ಮತ್ತು ದೋಣೆ ಇದೆ. ಅಕ್ಕ-ತಂಗಿ ಹೊಂಡದ ದಿಬ್ಬದ ಬಳಿ ಮೇಲೆ ಕಂಡುಬರುವ ಶಿಥಿಲ ಕಟ್ಟಡಗಳು ಸುಬ್ರಹ್ಮಣ್ಯೇಶ್ವರ ಮತ್ತು ಪರ್ಜನೇಶ್ವರ ಗುಡಿಗಳಾಗಿವೆ. ಹೊಂಡದ ಮುಂಭಾಗ ಆಂಜನೇಯ ಕಾಶಿವಿಶ್ವನಾಥ, ತುಂಗಭದ್ರಾ ದೇವಾಲಯಗಳಿವೆ. ಇಲ್ಲಿಂದ ತಣ್ಣೀರು ದೋಣೆ ಮತ್ತು ಒನಕೆ ಕಿಂಡಿಗಳಿಗೆ ಹೋಗಲು ದಾರಿಯಿದೆ. ಈ ಮಧ್ಯೆ ಇರುವ ಬಾಗಿಲಿಗೆ ನಾಗತಿ ಬಾಗಿಲು ತಣ್ಣೀರು ದೋಣೆ ಬಾಗಿಲು ಎಂದು ಕರೆಯುತ್ತಾರೆ. ೬.೪ x ೭.೫ x ೭ ಅಡಿ ಅಳತೆಯಲ್ಲಿ ನಿರ್ಮಾಣವಾಗಿರುವ ಈ ಬಾಗಿಲ ಒಳಭಾಗದಲ್ಲಿ ಪಹರೆ ಗೃಹಗಳಿವೆ.

## ಎರಡನೇ ಸುತ್ತಿನ ಕೋಟೆ

ಏಕನಾಥೇಶ್ವರಿ ಮಹಾದ್ವಾರದಿಂದ ಕೆಲವು ಮೆಟ್ಟಿಲುಗಳ ದೂರದಲ್ಲಿ ಎರಡನೆಯ ಸುತ್ತಿನ ಕೋಟೆಯ ಮಹಾದ್ವಾರವಿದೆ. ಈ ದ್ವಾರದಿಂದ ಬಲಭಾಗಕ್ಕೆ ಕೋಟೆಯು ಶಿವಾಲಯದ ಗುಡ್ಡವನ್ನು ಬಳಸಿಕೊಂಡು ಕಹಳೆ ಬತೇರಿಯನ್ನು ಸಂಧಿಸಿ ಮುಂದೆ ಲಾಲ್ ಬತೇರಿಯ ಬೆಟ್ಟದ ಸ್ವಲ್ಪ ಭಾಗವನ್ನು ಆವರಿಸಿದೆ.

ದ್ವಾರದ ಎಡಭಾಗದ ಕೋಟೆಯು ಝುಂಡಾ ಬತೇರಿ ಬೆಟ್ಟದವರೆಗೆ ಕಟ್ಟಲಾಗಿದೆ. ಅಲ್ಲಿಂದ ಮುಂದುವರೆದ ಕೋಟೆಯು ಭೀಮನಕಲ್ಲು ಬೆಟ್ಟದ ಪಶ್ಚಿಮ ಭಾಗದವರೆಗೂ ಸಾಗಿದೆ. ಈ ಸಾಲಿನಲ್ಲಿರುವ ದ್ವಾರಕ್ಕೆ ಟೀಕಿನ ಬಾಗಿಲೆಂದೂ ಕಸ್ತೂರಿ ರಂಗಪ್ಪ ನಾಯಕನ ಬಾಗಿಲೆಂದು ಕರೆಯಲಾಗುತ್ತದೆ. ರಕ್ಷಣಾ ದೃಷ್ಟಿಯಿಂದ ವಿಶೇಷ ತಂತ್ರಗಳೊಂದಿಗೆ ಈ ಬಾಗಿಲನ್ನು ನಿರ್ಮಾಣ ಮಾಡಲಾಗಿದೆ. ಹೊರ ನೋಡುಗರಿಗೆ ಈ ಬಾಗಿಲು ಒಂದು ಕೋಟೆ ಗೋಡೆಯ ರೀತಿ ಕಂಡುಬರುತ್ತದೆ. ಈ ಗೋಡೆಯು ೩೦ ಅಡಿ ಎತ್ತರವಿದ್ದು, ಗೋಡೆಯ ಹಿಂಭಾಗ ೨೨ ಮೆಟ್ಟಿಲುಗಳುಳ್ಳ ಎರಡು ಪ್ರಕಾರಗಳ ಮಧ್ಯ ಭಾಗದಲ್ಲಿ ದ್ವಾರಬಾಗಿಲಿದೆ. (ತೆಲಗಾವಿ, ವೆಂಕಣ್ಣಾಚಾರ್, ಜೋಯಿಸ್ ೧೯೮೦:೧೦)

೧೪ ಅಡಿ ಎತ್ತರ ೮ ಅಡಿ ಅಗಲ ೩೦.೫ ಅಡಿ ಉದ್ದವಿರುವ ಈ ಬಾಗಿಲನ್ನು ಕಮಾನಿನಾಕಾರದಲ್ಲಿ ರಚಿಸಲಾಗಿದೆ. ಬಾಗಿಲಿನ ಮೇಲೆ ತ್ರಿದಳಾಕಾರದ ತೆನೆಗಳು ಮತ್ತು ಚಿಕ್ಕ ಮಿನರೆಟ್‌ಗಳಿವೆ. ಈ ಬಾಗಿಲು ಮುಸ್ಲಿಂ ಶೈಲಿಯಲ್ಲಿದ್ದು, ಕಂಬಗಳು ಮತ್ತು ಶಿಲ್ಪಗಳು ಹಿಂದೂ ಶೈಲಿಯಲ್ಲಿವೆ. ಬಾಗಿಲ ಪಕ್ಕದಲ್ಲಿ ೫ ಅಡಿ ಎತ್ತರ, ೨.೫ ಅಡಿ ಅಗಲದ ದಿಡ್ಡಿ ಬಾಗಿಲುಗಳಿವೆ. ಬಾಗಿಲವಾಡಗಳ ಪಕ್ಕದಲ್ಲಿ ನಯಗೊಳಿಸಿದ ಆಯತಕಲ್ಲುಗಳನ್ನು ಕಬ್ಬಿಣದ ಸರಳುಗಳಿಂದ ಬಂಧಿಸಿ ಬೆಸೆಯಲಾಗಿದೆ. ಎಂತಹ ಆನೆಗಳಿಂದಲೂ ಈ ಬಾಗಿಲನ್ನು ನಾಶಗೊಳಿಸಲಾಗದಂತೆ ನಿರ್ಮಾಣ ಮಾಡಲಾಗಿದೆ. ಬಾಗಿಲುಗಳ ಚೌಕಟ್ಟಿನಲ್ಲಿ ಎರಡು ಗೂಡುಗಳನ್ನು ಮಾಡಲಾಗಿದೆ. ಒಳಭಾಗದಲ್ಲಿ ೪ ಅಡಿ ವೇದಿಕೆಯ ಮೇಲೆ ಎರಡೂ ಕಡೆ ಚಾವಡಿಗಳಿವೆ. ಈ ಚಾವಡಿಗಳ ಸ್ತಂಭಗಳ ಮೇಲೆ ಗಣಪತಿ, ಆಂಜನೇಯ, ಕಾಳಿಂಗವರ್ಧನ, ಕುಂಭ, ಶಾರ್ದೂಲ ಮುಂತಾದ ಉಬ್ಬುಶಿಲ್ಪಗಳಿವೆ. ಬಾಗಿಲ ಮುಂಭಾಗ ೩೨ ಅಡಿ ಎತ್ತರದ ಕೋಟೆಗೆ ೪೦ x ೭೫, ೪೦ x ೨೫, ಇಂಚಿನ ದಪ್ಪ ಕಲ್ಲುಗಳನ್ನು ಬಳಸಿ ನಿರ್ಮಿಸಿದ ಕೋಟೆ ವ್ಯವಸ್ಥಿತವಾಗಿದೆ. ಗೋಡೆಗಳಲ್ಲಿ ಬಂದೂಕು ಕಿಂಡಿಗಳು ಫಿರಂಗಿ ಗೂಡುಗಳಿವೆ. ಈ ಸುತ್ತನ್ನು ಫಿರಂಗಿ ಸುತ್ತ ಕೋಟೆಯೆಂದು ಕರೆಯಲಾಗಿದೆ. ಗೋಡೆಯ ಹಿಂಭಾಗದಲ್ಲಿ ಫಿರಂಗಿ ಗಾಡಿಗಳು ಚಲಿಸಲು ಅವಕಾಶ ಕಲ್ಪಿಸಲಾಗಿದೆ. ಬಾಗಿಲಿನ ಎರಡು ಕಡೆ ವ್ಯವಸ್ಥಿತವಾದ ಕಾವಲು ಬುರುಜುಗಳಿವೆ. ಒಳಕೋಟೆ ಮತ್ತು ಎರಡನೇ ಸುತ್ತಿನ ಕೋಟೆಗಳ ಮಧ್ಯಭಾಗದಲ್ಲಿ ಗಣೇಶನ ಗುಡಿ, ಶೃಂಗೇರಿ ಸ್ವಾಮಿಗಳ ಮಠ, ಗರಡಿಮನೆ, ಮದ್ದಿನಮನೆ, ಕಲ್ಲಿನ ಕಣಜಗಳಿವೆ. ಗರಡಿ ಮನೆಯ ಮೇಲ್ಭಾಗದಲ್ಲಿ ಬಿಚ್ಚುಗತ್ತಿ ಭರಮಣ್ಣ ನಾಯಕ ಮತ್ತು ಹಿರೇಮದಕರಿ ನಾಯಕನೆಂದು ಹೇಳಲಾದ ಸಮಾಧಿಗಳಿವೆ.

## ಮೂರನೇ ಸುತ್ತಿನ ಕೋಟೆ

ಮೂರನೇ ಸುತ್ತಿನ ಕೋಟೆಯ ಮಹಾದ್ವಾರಕ್ಕೆ ಗಂಟೆಯ ಬಾಗಿಲು ಎಂದೆ ಹೆಸರಿದೆ. ಹಿಂದೆ ಈ ಬಾಗಿಲಿಗೆ ಗಂಟೆಗಳನ್ನು ಅಳವಡಿಸಿದ್ದು, ಬಾಗಿಲು ತೆರೆದಾಗ ಮತ್ತು ಮುಚ್ಚಿದಾಗ

ಅವುಗಳಿಂದ ಮಂಜುಳನಾದ ಹೊರಹೊಮ್ಮುತ್ತಿತ್ತೆಂದು ಹೇಳಲಾಗಿದೆ. ಗಂಟೆಗಳನ್ನು ಅಳವಡಿಸಿದ್ದರಿಂದ ಈ ದ್ವಾರಕ್ಕೆ ಗಂಟೆಯ ಬಾಗಿಲೆಂದು ಕರೆಯಲಾಗಿದೆ. ಈ ದ್ವಾರದ ಒಳಭಾಗದಲ್ಲಿ ಎರಡು ಚಾವಡಿಗಳಿವೆ. ಮುಂಭಾಗದಲ್ಲಿ ಎರಡು ತಿರುವುಳ್ಳ ಕೋಟೆ ಗೋಡೆಯಿದೆ. ದ್ವಾರದ ಎಡಭಾಗಕ್ಕೆ ಬೆಟ್ಟದ ನೀರು ಹೊರಬರಲು ತೂಬನ್ನು ಮಾಡಲಾಗಿದೆ. ಈ ಬಾಗಿಲ ಪಕ್ಕದಲ್ಲಿ ಗೊಂಬೆ ಚಾವಡಿಯಿದೆ. ಪಾಳೆಯಗಾರರು ಸಾಕಿಕೊಂಡಿದ್ದ ಕುದರೆಗಳು ಆನೆಗಳು ಮೃತಪಟ್ಟಿದ್ದರ ನೆನಪಿಗಾಗಿ ಆನೆ ಮತ್ತು ಕುದುರೆಗಳ ಗೊಂಬೆಗಳನ್ನು ಈ ಚಾವಡಿಯಲ್ಲಿ ಸ್ಥಾಪಿಸುತ್ತಿದ್ದಾರೆನ್ನಲಾಗಿದೆ. ಈ ಕೋಟೆಯ ಗೋಡೆಯ ಸಾಲುಗಳು ಸಹ ಎರಡನೆಯ ಕೋಟೆಯ ಸಾಲಿನಂತೆ ಗಿರಿಗಳ ಮೇಲೆ ಹರಡಿಕೊಂಡಿವೆ.

## ನಾಲ್ಕನೇ ಸುತ್ತಿನ ಕೋಟೆ

ನಾಲ್ಕನೆಯ ಸುತ್ತಿನ ಕೋಟೆಯ ಬಾಗಿಲಿಗೆ ಜಾಗಟೆ ಬಾಗಿಲು ಎಂದು ಕರೆಯುತ್ತಾರೆ. ಈ ಬಾಗಿಲಿನ ಹಿಂದೆ ಜಾಗಟೆಗಳನ್ನು ಕಟ್ಟುತ್ತಿದ್ದರಿಂದ ಈ ಹೆಸರು ಒಂದಿದೆ. ಇದು ೧೬ ಅಡಿ ಎತ್ತರ ೪ ಅಡಿ ಅಗಲ ೧೮ ಅಡಿ ಉದ್ದವಿರುವ ಈ ಬಾಗಿಲ ಕೋಟೆ ಗೋಡೆಯ ಎತ್ತರ ೨೦ ಅಡಿ ಇದೆ. ಈ ಬಾಗಿಲ ಸಮೀಪದ ಕೋಟೆಯ ಸಂದುಗಳಲ್ಲಿ ಗೂಡುಗಳನ್ನು ನಿರ್ಮಿಸಿ ವಿಷ ತುಂಬಿದ ಆಯುಧಗಳನ್ನು ಬಚ್ಚಿಡುತ್ತಿದ್ದರು. ಕೋಟೆಯ ಮೇಲೆ ದಾಳಿ ನಡೆದ ಸಂದರ್ಭದಲ್ಲಿ ಈ ಕತ್ತಿಗಳನ್ನು ಶತ್ರು ದಳದವರ ಮೇಲೆ ಪ್ರಯೋಗಿಸಲಾಗುತ್ತಿತ್ತು. ಆಕ್ರಮಣ ನಡೆದಾಗ ಪಹರೆಯವರು ಶತ್ರುಗಳ ವಶವಾಗುತ್ತೇವೆಂದು ತಿಳಿದಾಗ ಈ ಆಯುಧಗಳಿಂದ ತಮ್ಮನ್ನು ತಾವೇ ತಿವಿದುಕೊಂಡು ವೀರಸ್ವರ್ಗವನ್ನುಪ್ಪುತ್ತಿದ್ದರು. ವಿಷದ ಕತ್ತಿಗಳು ಇಲ್ಲಿದ್ದುದ್ದರಿಂದ ಈ ಬಾಗಿಲಿಗೆ ವಿಷದ ಕತ್ತಿಬಾಗಿಲು ಎಂಬ ಹೆಸರು ಕೂಡ ಇದೆ. ಇದರ ಪಕ್ಕದಲ್ಲಿರುವ ಒಂದು ಶಾಸನ ವೀರಭದ್ರನ ಕೊತ್ತಲು ಎಂದು ತಿಳಿಸುತ್ತದೆ. ಕೊತ್ತಲುಗಳನ್ನು ತಮ್ಮ ಇಷ್ಟದೈವಗಳ ಹೆಸರಿನಿಂದ ಕರೆಯುತ್ತಿದ್ದಾರೆಂಬ ಸಂಗತಿ ಈ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನವು ವಿಜಯನಗರ ಅರಸರ ಕಾಲದಲ್ಲಿಯೇ ಈ ಕೋಟೆಯ ಸಾಲು ಇತ್ತೆಂದು ಇದರಿಂದ ತಿಳಿದುಬರುತ್ತದೆ.

## ಐದನೇ ಸುತ್ತಿನ ಕೋಟೆ

ಐದನೆಯ ಸುತ್ತಿನ ಕೋಟೆಯನ್ನು ಕಾಮನಬಾಗಿಲು ಸುತ್ತು ಎಂದು ಕರೆಯಲಾಗಿದೆ. ಈ ಬಾಗಿಲ ಬಲಭಾಗಕ್ಕೆ ಕಾಮನ ಬಾವಿ ಎಂದು ಕರೆಯುವ ಪುಷ್ಕಣಿ ಇದೆ. ಕೆಲವು ದಾಖಲೆಗಳಲ್ಲಿ ಕಾಮಗೇತಿ ಬಾಗಿಲು ಎಂದೂ ಕೂಡ ಹೇಳಲಾಗಿದೆ. ಅಲ್ಲದೇ ಕಾಮದೇವನ ಶಿಲ್ಪವನ್ನು ಇಲ್ಲಿ ಅಳವಡಿಸಿರುವುದರಿಂದ ಇದಕ್ಕೆ ಕಾಮನಬಾಗಿಲು ಎಂಬ ಹೆಸರಿದೆ. ಚಿನ್ಮೂಲಾದ್ರಿ ಬೆಟ್ಟದ

ತಪ್ಪಲಿನಲ್ಲಿ ಅಳವಡಿಸಿ ಕೊಂಡಿರುವುದರಿಂದ ಇದಕ್ಕೆ ಕಾಮನಬಾಗಿಲು ಎಂಬ ಹೆಸರೂ ಇದೆ. ಬಾಗಿಲ ಹೊರಭಾಗವನ್ನು ಕೋಟೆಗೋಡೆಯಂತೆ ಕಟ್ಟಿದ್ದಾರೆ. ೮ x ೮, ೧೦ x ೪ ಅಡಿ ದಪ್ಪದ ನಯಗೊಳಿಸಿದ ಕಲ್ಲುಗಳನ್ನು ಗಾರೆಯನ್ನಾಗಲೀ ಅಥವಾ ಮಣ್ಣನ್ನಾಗಲೀ ಬಳಸದೇ ಒಂದರ ಮೇಲೊಂದರಂತೆ ಇಟ್ಟು ವ್ಯವಸ್ಥಿತವಾದ ಗೋಡೆಯನ್ನು ನಿರ್ಮಿಸಿದ್ದಾರೆ. ಕಾಮನಬಾಗಿಲು ೧೯.೨ ಮೀಟರ್ ಅಂತರದಲ್ಲಿರುವ ೨೩ ಅಡಿ ಎತ್ತರದ ಎರಡು ಪ್ರಕಾರಗಳ ಮಧ್ಯೆ ನಿರ್ಮಿಸಲಾಗಿದೆ. ಹಿಂಬದಿಯಲ್ಲಿರುವ ಮಹಾದ್ವಾರಕ್ಕೆ ಹೋಗಲು ೪ ತಿರುವುಗಳನ್ನು ಬಳಸಬೇಕು. ಮೊದಲನೆಯದಾಗಿ ಪೂರ್ವದಿಂದ ಪಶ್ಚಿಮಕ್ಕೆ ೨೩ ಮೀ ನಂತರ ಉತ್ತರಕ್ಕೆ ೨೭ ಮೀಟರ್ ಕ್ರಮಿಸಿ ಪುನಃ ಪಶ್ಚಿಮಕ್ಕೆ ೨೦ ಮೀ. ದೂರ ಹೋಗಿ ಮತ್ತು ೨೦ ಮೀ. ದಕ್ಷಿಣಕ್ಕೆ ಬಂದರೆ ಅಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಪ್ರವೇಶಿಸುವ ಹಾಗೆ ೮.೭ x ೨೧ x ೨೩ ಅಡಿಗಳಲ್ಲಿ ದ್ವಾರಬಾಗಿಲನ್ನು ರಚಿಸಲಾಗಿದೆ. ಇದರ ಪಕ್ಕದಲ್ಲಿ ೪ ಅಡಿ ಅಗಲದ ೭ ಅಡಿ ಎತ್ತರದ ದಿಡ್ಡಿಬಾಗಿಲು ಇದೆ.

ದ್ವಾರದ ಹಿಂಭಾಗದಲ್ಲಿ ಇಟ್ಟಿಗೆಯಿಂದ ಕಟ್ಟಿದ ಅವಶೇಷಗಳಿವೆ. ಬಹುಶಃ ಆಂಗ್ಲರ ಕಾಲದಲ್ಲಿ ಕಟ್ಟಿದ ಪಹರೆ ಚಾವಡಿ ಇದಾಗಿರಬಹುದೆಂದು ಊಹಿಸಲಾಗಿದೆ. ಬಾಗಿಲು ತೋಳುಗಳನ್ನು ಶಾರ್ದೂಲ ಮತ್ತು ಹೂವಿನ ಬಳ್ಳಿಯ ಚಿತ್ರಗಳಿಂದ ಅಲಂಕರಿಸಲಾಗಿದೆ. ಪ್ರತಿ ತಿರುವುಗಳು ೨೦ ರಿಂದ ೨೭ ಮೀ. ಅಂತರವನ್ನು ಕಾಯ್ದುಕೊಂಡಿವೆ. ಮುಂಭಾಗದ ಬಿತ್ತಿಯ ಮೇಲೆ ೮.ಅಡಿ ಉದ್ದ ೭ ಹೆಡೆಯ ಆದಿಶೇಷನ ಉಬ್ಬುಶಿಲ್ಪ ಅತ್ಯಾಕರ್ಷಕವಾಗಿದೆ. ಇಷ್ಟೇ ಅಲ್ಲದೆ ಗಣೇಶ, ಕುಂಭ, ಕಮಲ, ಬಸವ, ಶಿವಲಿಂಗ, ವೀರಭದ್ರ, ಗಂಡಬೇರುಂಡ, ಹಂಸ ಮೊದಲಾದ, ಶಿಲ್ಪಗಳನ್ನು ಕಾಣಬಹುದು. ಇಲ್ಲಿನ ಕೋಟೆಗೋಡೆಗಳು ೨೫ ಅಡಿ ಎತ್ತರವಾಗಿದ್ದು ೯೦° ನೇರದಲ್ಲಿ ನಿರ್ಮಿಸಿರುವುದರಿಂದ ಶತ್ರುಗಳು ಗೋಡೆಯನ್ನೇರಲು ಸಾಧ್ಯವಾಗುತ್ತಿರಲಿಲ್ಲ. ೫.೫ ಮೀ. ಮಧ್ಯೆ ವಿಸ್ತಾರವಾಗಿರುವ ಬಾಗಿಲ ಎರಡೂ ಕಡೆ ಪ್ರಕಾರಗಳಿವೆ. ಈ ಪ್ರಕಾರಗಳ ನಡುವೆ ಸಾಗುವ ಶತ್ರುಗಳನ್ನು ಪೇಚಿಗೆ ಸಿಲುಕಿಸಿ ನಿರ್ನಾಮ ಮಾಡುವ ತಂತ್ರಕ್ಕನುಸಾರವಾಗಿ ಈ ಬಾಗಿಲನ್ನು ನಿರ್ಮಿಸಲಾಗಿದೆ. ಒಂದು ವೇಳೆ ಶತ್ರು ಸೈನಿಕರು ನುಗ್ಗಿಬಂದರೆ ಅಥವಾ ಈ ಬಾಗಿಲಿನಲ್ಲಿ ಹೊಕ್ಕರೆ ಹುಲಿಯ ಬಾಯಲ್ಲಿ ಸಿಕ್ಕವರಂತೆ ಸಾಯಬೇಕಾದುದರಿಂದ ಈ ಬಾಗಿಲನ್ನು ಹುಲಿಮುಖದ ಬಾಗಿಲೆಂದು ಕರೆಯಲಾಗಿದೆ. (ಗಿರಿಜ ೧೯೯೧:೨೨) ಚಿತ್ರದುರ್ಗದ ಕೋಟೆಯಲ್ಲಿ ಇಷ್ಟೊಂದು ಸುಂದರವಾದ ರಚನೆ ಮತ್ತೆಲ್ಲಿಯೂ ಕಂಡುಬರುವುದಿಲ್ಲ.

ಕಾಮನ ಸುತ್ತಿನ ಕೋಟೆಯು ಅತ್ಯಂತ ಬಲಾಢ್ಯವಾಗಿದ್ದು, ಅಲ್ಲಲ್ಲಿ ಬೃಹದಾಕಾರವಾದ ವೃತ್ತಾಕಾರದ ಮತ್ತು ಚೌಕಾಕಾರದ ಬುರುಜುಗಳಿಂದ ನಿರ್ಮಾಣಗೊಂಡಿದೆ. ಈ ಕೋಟೆಯ ಹೊರಭಾಗದಲ್ಲಿ ಕೆರೆಯ ರೀತಿಯಲ್ಲಿ ೬೦ ರಿಂದ ೧೦೦ ಅಡಿ ಅಗಲದ ಭಾರೀ ಕಂದಕವಿದೆ.

ಕಾಮನ ಬಾಗಿಲು ಎಡಭಾಗದಿಂದ ಪ್ರಾರಂಭವಾದ ಕೋಟೆಯು ಒಂಟಿಕಲ್ಲುಬಸವನಗುಡಿಯನ್ನು ಸುತ್ತಿ ಬಸವ ಬುರುಜಿನ ತನಕ ಸಾಗುತ್ತದೆ. ಬಲಭಾಗದ ಸುತ್ತ ಕರಿವರ್ತಿ ದೇವಸ್ಥಾನ, ರಾಮದೇವರ ಒಡ್ಡುಗಳನ್ನು ಬಳಸಿಕೊಂಡು ಲಾಲ್‌ಬತೇರಿ ಗುಡ್ಡವನ್ನು ಸೇರುತ್ತದೆ. ಈ ನಾಲ್ಕನೇ ಮತ್ತು ೫ನೇ ಸುತ್ತಿನ ಮಧ್ಯಭಾಗದಲ್ಲಿ ಕಲ್ಲಿನ ತೊಟ್ಟಿ, ಎಣ್ಣೆಕೊಳ, ಮದ್ದು ಬೀಸುವ ಕಲ್ಲು, ರುಬ್ಬುಗುಂಡು, ಶಸ್ತ್ರಾಗಾರವೆಂದು ಕರೆಯಬಹುದಾದ ಕಟ್ಟಡದ ಅವಶೇಷ, ಒಂಟಿಕಲ್ಲುಬಸವನಗುಡಿ, ಬನಶಂಕರಿ ದೇವಾಲಯ, ಚಳ್ಳಕೆರೆಅಮ್ಮನಗುಡಿ, ಶಿವಾಲಯ ಇನ್ನು ಮುಂತಾದ ಸ್ಮಾರಕಗಳಿವೆ.

ಬನಶಂಕರಿ ಗುಡಿಗೆ ಹೊಂದಿಕೊಂಡಂತೆ ೭೦ x ೭೦ ಅಡಿಗಳ ಹಾಗೂ ೩ ಮೀಟರ್ ಆಳದ ಚೌಕಾಕಾರದ ಬಾವಿಯಿದೆ. ಬಾವಿಯೊಳಗೆ ಇಳಿಯಲು ಮೆಟ್ಟಿಲುಗಳಿವೆ. ಬಾವಿಯ ತಳದಿಂದ ೩ ಮೀ ಎತ್ತರದಲ್ಲಿ ಕಲ್ಲಿನ ತೊಲೆಗಳನ್ನು ಅಡ್ಡಹಾಕಿ ಒಂದರಂತೆ ೪ ಬೀಸುವ ಕಲ್ಲುಗಳನ್ನು ಜೋಡಿಸಿದ್ದಾರೆ. ಪ್ರತಿ ಕಲ್ಲಿನ ಸುತ್ತಳತೆ, ೫.೬ ಮೀ. ಇದೆ. ಕೆಳಗಿನ ಕಲ್ಲಿನ ದಪ್ಪ ೧೭ ಅಂಗುಲವಿದ್ದರೆ ಮೇಲಿನ ಕಲ್ಲು, ೯.೫. ಅಂಗುಲ ದಪ್ಪವಿದೆ. ಮೇಲಿನ ಕಲ್ಲುಗಳ ಸುತ್ತಲೂ ೨.೫ ಇಂಚು ಉದ್ದ, ೩.೫ ಇಂಚು ಆಳದ ೩೮ ಚೌಕಾಕೃತಿಯ ಅಂಚುಗಂಡಿಗಳಿವೆ. ಮಧ್ಯೆ ಇವುಗಳಲ್ಲಿ ಒಟ್ಟಿಗೆ ಕೆಲಸ ಮಾಡುವಂತೆ ಸಂಯೋಜಿಸಲಾಗಿದೆ. ಈ ಬೃಹತ್ ವ್ಯವಸ್ಥೆಯ ಬಗ್ಗೆ ವಿದ್ವಾಂಸರು ಮದ್ದು ಬೀಸುವ ಕಲ್ಲುಗಳು, ಹಿಟ್ಟು ಬೀಸುವ ಕಲ್ಲುಗಳು, ಗಾರೆ ಅರೆಯುವ ಕಲ್ಲುಗಳಿರಬಹುದೆಂಬ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ರಚನೆ ಮತ್ತು ವಿನ್ಯಾಸಗಳನ್ನು ಗಮನಿಸಿದರೆ ಈ ಕಲ್ಲುಗಳು ಹೈದರಾಲಿ ಇಲ್ಲವೆ ಟಿಪ್ಪುವಿನ ಅವಧಿಯಲ್ಲಿ ನಿರ್ಮಾಣವಾದಂತೆ ತೋರುತ್ತದೆ. ಈ ಬೀಸುವ ಕಲ್ಲುಗಳನ್ನು ಉಪಯೋಗಿಸದೆ ಇರುವುದರಿಂದ ನಿರ್ದಿಷ್ಟವಾಗಿ ಇವುಗಳನ್ನು ಏತಕ್ಕೆ ಬಳಸುತ್ತಿದ್ದಾರೆಂದು ಹೇಳುವುದು ಕಷ್ಟ. ಒಂದು ವೇಳೆ ಇವುಗಳನ್ನು ಬಳಸಿದ್ದರೆ ಕಲ್ಲುಗಳು ಸವೆಯುತ್ತಿದ್ದವು ಹಾಗೂ ಬೀಸಿದ ವಸ್ತುವಿನ ಅವಶೇಷ ಬಾವಿಯಲ್ಲಿರುತ್ತಿತ್ತು. ಇದರಿಂದ ಇವುಗಳನ್ನು ಬಳಸಿದ ಉದ್ದೇಶವನ್ನು ಅರ್ಥೈಸಬಹುದಿತ್ತು. ಇದರ ಪಕ್ಕದಲ್ಲಿಯೇ ಮದ್ದಿನ ಕಾರ್ಖಾನೆಯಿತ್ತು ಎಂದು ಹೇಳಲು ಅನೇಕ ಅವಶೇಷಗಳು ದೊರಕಿರುವುದರಿಂದಲೂ ಕೋಟೆಯಲ್ಲಿ ಈಗಾಗಲೇ ಬೃಹತ್ ಪ್ರಮಾಣದಲ್ಲಿ ಗಾರೆಯನ್ನು ಬಳಸಿರುವುದರಿಂದಲೂ ಇವು ಮದ್ದು ಬೀಸುವ ಕಲ್ಲುಗಳೆಂದು ಹೇಳಬಹುದು. ಕಾಮನಬಾಗಿಲ ಮುಂದೆ ಒಂದೇ ಕಲ್ಲನ್ನು ತುಂಬಾ ನಯವಾಗಿ ಕೊರೆದು ಮಾಡಿರುವ ತೊಟ್ಟಿಯೊಂದಿದೆ. ಈ ತೊಟ್ಟಿಯಲ್ಲಿ ನೀರು ಶೇಖರಿಸಿ ಆನೆಗಳಿಗೆ ನೀರು ಕುಡಿಸುತ್ತಿದ್ದಾರೆಂದು ಹೇಳಲಾಗಿದೆ (ತೆಲಗಾವಿ ೧೯೮೦:೧೩). ಈ ಕೋರಿಯು ೧೦ ಅಡಿ ಉದ್ದ ೬.೨. ಅಡಿ ಅಗಲ, ೬.೧ ಅಡಿ ಎತ್ತರವಿದೆ. ತೊಟ್ಟಿಯ ಕಲ್ಲಿನ ದಪ್ಪ ೫ ಇಂಚು ಇದೆ. ತುಂಬಾ ನೀಳವಾಗಿ ಹಾಗೂ ಸೂಕ್ಷ್ಮವಾಗಿ ಕೊರೆದಿರುವ ತೊಟ್ಟಿಯ ಒಳಭಾಗವು ೪.೪. ಅಡಿ ಆಳ ಇದೆ. ಇದೇ ರೀತಿ ೪ನೇ ಹೆಬ್ಬಾಗಿಲ ಹತ್ತಿರ ಹುಟ್ಟು

ಬಂಡೆಯೊಂದರಲ್ಲಿ ಕೊರೆದು ಮಾಡಿರುವ ಎರಡು ತೊಟ್ಟಿಗಳಿವೆ. ಭೂಮಟ್ಟದಿಂದ ಎತ್ತರದಲ್ಲಿರುವ ದೊಡ್ಡದಾದ ತೊಟ್ಟಿಯು ಪೂರ್ವ ಪಶ್ಚಿಮವಾಗಿ ೧೩ ಅಡಿ ಉತ್ತರ ದಕ್ಷಿಣವಾಗಿ ೬.೬ ಅಡಿ ಇದ್ದು ೮ ಅಡಿ ಆಳವಿದೆ. ಇದರಲ್ಲಿ ಮದ್ದು ತುಂಬಲು ಉಪಯೋಗಿಸುತ್ತಿದ್ದರೆಂದು ಹೇಳಲಾಗಿದೆ. ಇದರ ಪಕ್ಕದಲ್ಲಿ ಕೆಳಭಾಗದಲ್ಲಿರುವ ಚಿಕ್ಕ ತೊಟ್ಟಿಯನ್ನು ಪೂರ್ವ ಪಶ್ಚಿಮವಾಗಿ ೭ ಅಡಿ ಉತ್ತರ ದಕ್ಷಿಣವಾಗಿ ೫ ಅಡಿ ಮತ್ತು ೩ ಅಡಿ ಆಳವಿದೆ. ಇದರಲ್ಲಿ ಎಣ್ಣೆ ತುಂಬುತ್ತಿದ್ದರು ಎಂದು ಹೇಳಲಾಗಿದೆ. ಈ ೨ ತೊಟ್ಟಿಗಳಿಗೂ ಮುಚ್ಚುವ ವ್ಯವಸ್ಥೆ ಮಾಡಿದ್ದರ ಗುರುತುಗಳು ಇಲ್ಲಿ ಸಿಗುತ್ತವೆ.

**ಆರನೇ ಸುತ್ತಿನ ಕೋಟೆ**

ಬೆಟ್ಟದ ಪೂರ್ವ ದಿಕ್ಕಿನಲ್ಲಿ ಹೊರಕೋಟೆಯ ಒಳಭಾಗಕ್ಕೆ ೬ನೆಯ ಸುತ್ತಿನ ಕೋಟೆಯು ಚಿನ್ಮೂಲಾದ್ರಿಯ ಗಿರಿಸ್ತೋಮಗಳನ್ನು ಬಳಸಿಕೊಂಡು ನಿರ್ಮಿಸಲಾಗಿದೆ. ಇದರ ಪೂರ್ವ ಮತ್ತು ಉತ್ತರ ಭಾಗಗಳು ಗಿರಿಯ ತಪ್ಪಲಿನಲ್ಲಿ ಸುತ್ತಿಕೊಂಡಿದ್ದು ಉಳಿದಂತೆ ಅವಶ್ಯಕತೆಯಿರುವ ಕಡೆ ಕಲ್ಲುಬಂಡೆಗಳ ಮಧ್ಯೆ ಕೋಟೆಯನ್ನು ಕಟ್ಟಲಾಗಿದೆ. ಈ ಸುತ್ತಿನ ಮಹಾದ್ವಾರಕ್ಕೆ ಗಾರೆಬಾಗಿಲೆಂದು ಕರೆಯುವರು. ಈ ಬಾಗಿಲಿನ ಪ್ರಕಾರಗಳಿಗೆ ನಯವಾದ ಗಾರೆಯಿಂದ ಲೇಪನ ಮಾಡಿರುವುದರಿಂದ ಗಾರೆಬಾಗಿಲು ಎಂಬ ಹೆಸರು ಬಂದಿದೆ. ಈ ಬಾಗಿಲು ೧೩ ಅಡಿ ಅಗಲ, ೧೨ ಅಡಿ ಎತ್ತರವಿದೆ. ಗಾರೆಬಾಗಿಲ ಸುತ್ತಿನ ಕೋಟೆಯು ದಕ್ಷಿಣದಲ್ಲಿ ಲಾಲ್‌ಬತೇರಿ ಕೋಟೆಯ ಮಹಾದ್ವಾರದವರೆಗೆ ವಿಸ್ತಾರಗೊಂಡಿದೆ. ಈ ಕೋಟೆಯು ೩೦ ಅಡಿ ಎತ್ತರವಾಗಿದ್ದು, ೧೫ ಅಡಿ ಅಗಲವಾಗಿದೆ. ಗೋಡೆಯ ಹೊರಭಾಗದಲ್ಲಿ ೬೦ ರಿಂದ ೭೦ ಅಡಿ ಅಗಲದ ೧೫ ಅಡಿ ಆಳದ ಕಂದಕವಿದೆ. ಈ ಕಂದಕವು ಮುಂದೆ ಕಾಮನಬಾಗಿಲ ಹತ್ತಿರ ೧೨೦ ಅಡಿಗಿಂತಲೂ ಹೆಚ್ಚು ಅಗಲವಾಗುತ್ತಾ ಮುಂದೆ ಸಾಗಿದೆ. ಈ ಕೋಟೆಯ ಸಾಲು ಕೆಂಚೇಶ್ವರ ದೇವಸ್ಥಾನದಿಂದ ಲಾಲ್‌ಬತೇರಿ ಬೆಟ್ಟವನ್ನು ಸೇರುತ್ತದೆ. ಮುಂದೆ ನೆಲ್ಲಿಕಾಯಿ ಸಿದ್ಧಪ್ಪನ ಬೆಟ್ಟವನ್ನು ಸುತ್ತಿಕೊಂಡು ಗೋಪಾಲಕೃಷ್ಣ ದೇವಸ್ಥಾನದ ಹಿಂಭಾಗದಿಂದ ತಣ್ಣೀರು ದೋಣೆ ಬೆಟ್ಟವನ್ನು ಬಳಸಿದೆ. ಮುಂದುವರೆದು ಫಲ್ಗುಣೇಶ್ವರ ದೇವಾಲಯ ಹಿಂಭಾಗದಲ್ಲಿ ಭೀಮನಕಲ್ಲು ಮತ್ತು ಝುಂಡಾ ಬತೇರಿ ಬೆಟ್ಟಗಳನ್ನಾವರಿಸಿ ಬಸವನ ಬುರುಜು ಬೆಟ್ಟದ ಬಳಿ ಹಾದು ಪುನಃ ಗಾರೆ ಬಾಗಿಲನ್ನು ಸೇರುತ್ತದೆ.

**ಏಳನೇ ಸುತ್ತಿನ ಕೋಟೆ:**

ಚಿತ್ರದುರ್ಗದ ಏಳು ಸುತ್ತಿನ ಕೋಟೆಯ ಅಂಗಭಾಗವಾದ ಹೊರಸುತ್ತು ಬೆಟ್ಟದ ದಕ್ಷಿಣದ ತುದಿಯಿಂದ ಪೂರ್ವಕ್ಕೆ ಪ್ರಾರಂಭವಾಗಿ ಪೂರ್ವ ಮತ್ತು ಉತ್ತರ ಭಾಗಗಳ ಹಳೆಯ

ಊರುಗಳನ್ನೊಳಗೊಂಡಂತೆ ಇಡೀ ಬೆಟ್ಟವನ್ನು ಆವರಿಸಿಕೊಂಡಿದೆ. ಇದರ ಉದ್ದ ಸುಮಾರು ೧೩ ಕಿ.ಮೀ. ಎಂದು ಅಂದಾಜು ಮಾಡಲಾಗಿದೆ. ಈ ಹೊರಸುತ್ತಿನ ಕೋಟೆಯಲ್ಲಿ ೫ ಪ್ರಮುಖವಾದ ಮಹಾದ್ವಾರಗಳಿವೆ. ನಾಲ್ಕು ದಿಕ್ಕಿನಲ್ಲಿ ಒಂದರ ನಂತರ ಒಂದರಂತೆ ದ್ವಾರಗಳಿದ್ದು ೫ನೆಯದು ವಾಯವ್ಯ ದಿಕ್ಕಿನಲ್ಲಿದೆ (ರಾಜಶೇಖರಪ್ಪ ೨೦೦೧:೩೨).

ರಾಜಶೇಖರಪ್ಪ ಬಿ., ದುರ್ಗಶೋಧನ, ೨೦೦೧ ಎಂಬ ಲೇಖನದಲ್ಲಿ ಚರ್ಚಿಸಿರುವಂತೆ ಚಿತ್ರದುರ್ಗದ ಪಾಳೆಯಗಾರರು ಪ್ರತಿಯೊಂದು ಬಾಗಿಲನ್ನು ಒಂದೊಂದು ದೇವರ ಹೆಸರಿನಲ್ಲಿ ನಿರ್ಮಿಸಿರುವುದು ಗಮನಾರ್ಹ. ಪೂರ್ವದಿಕ್ಕಿನ ಮಹಾದ್ವಾರದ ರಂಗಯ್ಯನ ಬಾಗಿಲಿಗೆ ಮನೆಯ ದೇವರಾದ ನೀರ್ಥಡಿ ರಂಗನಾಥ ಸ್ವಾಮಿಯ ಹೆಸರು ನೀಡಲಾಗಿದೆ. ಈ ಬಾಗಿಲು ಸಿರಾಕ್ಕೆ ಅಭಿಮುಖವಾಗಿರುವುದರಿಂದ ಸಿರಾದರ್ವಾಜ ಎಂದು ಕರೆಯುವರು. ೧೦ ಅಡಿ ಅಗಲ ೧೫ ಅಡಿ ಎತ್ತರದಲ್ಲಿ ನಿರ್ಮಿಸಿದ ಈ ಬಾಗಿಲು ಕಮಾನಿಕಾರದಲ್ಲಿದೆ. ರಂಗಯ್ಯನ ಬಾಗಿಲು ಕೋಟೆಯ ಸುತ್ತ ೨೫ ಅಡಿ ಎತ್ತರವಾಗಿದ್ದು, ೪೦ ಅಡಿ ಅಗಲವಿದೆ. ಕೋಟೆಯುದ್ಧಕ್ಕೂ ಇದ್ದ ಕಂದಕ ಈಗ ಅಲ್ಲಲ್ಲಿ ಮಾತ್ರ ಸ್ವಲ್ಪ ಉಳಿದುಕೊಂಡಿದೆ. ಈ ಮಹಾದ್ವಾರದ ೪ ದಿಕ್ಕುಗಳಲ್ಲಿಯೂ ೪ ಬತೇರಿಗಳಿದ್ದು ಸುತ್ತಲೂ ಕೈಪಿಡಿ ಗೋಡೆಗಳಿವೆ. ಇದರ ಎರಡು ಬದಿಯಲ್ಲಿ ಇದ್ದ ದಿಡ್ಡಿ ಬಾಗಿಲುಗಳನ್ನು ಮುಚ್ಚಿ ಸೀತಾರಾಮ ಮತ್ತು ಆಂಜನೇಯ ಗುಡಿಗಳನ್ನು ನಿರ್ಮಿಸಲಾಗಿದೆ. ಬಾಗಿಲಿನ ಒಳಭಾಗದಲ್ಲಿ ಇದ್ದ ಪಹರೆಯವರ ೨ ಕೊಠಡಿಗಳನ್ನು ಇತ್ತೀಚೆಗೆ ಸರ್ಕಾರಿ ಪ್ರಾಚ್ಯವಸ್ತು ಸಂಗ್ರಹಾಲಯವನ್ನಾಗಿ ಪರಿವರ್ತಿಸಲಾಗಿದೆ.

ಇದೇ ಸುತ್ತಿನ ಉತ್ತರಕ್ಕೆ ಇರುವ ಬಾಗಿಲೇ ಸಂತೆ ಬಾಗಿಲು. ಈ ಬಾಗಿಲಿಗೆ ಸಿದ್ಧೇಶ್ವರ ಮಹಾದ್ವಾರ, ಸಿದ್ಧಯ್ಯನ ಬಾಗಿಲು, ಸಂಪಿಗೆ ಸಿದ್ದೇಶ್ವರ ಆನೆಬಾಗಿಲು, ಪತೇದರ್ವಾಜ್/ಜಯದ ಬಾಗಿಲು ಎಂಬ ಹೆಸರುಗಳಿವೆ. ಇದರ ಮೂಲ ಹೆಸರು ಸಂಪಿಗೆ ಸಿದ್ದೇಶ್ವರನ ಬಾಗಿಲು ಎಂದು ಹೇಳಲಾಗಿದೆ. ಈ ಬಾಗಿಲು ೧೦ ಅಡಿ ಅಗಲ ೧೫ ಅಡಿ ಎತ್ತರದಲ್ಲಿ ನಿರ್ಮಿಸಲಾಗಿದೆ. ಬಾಗಿಲಿನ ಉದ್ದ ೨೮ ಅಡಿ ಇದ್ದು ಕೋಟೆಯ ಗೋಡೆಯು ೨೫ ಅಡಿ ಎತ್ತರದಲ್ಲಿದೆ. ಬಾಗಿಲ ಮೇಲ್ಭಾಗದಲ್ಲಿ ಕರಿಯ ಕಲ್ಲಿನ ೨ ಆನೆಗಳನ್ನು ಜೋಡಿಸಿ ಅಂದವನ್ನು ಹೆಚ್ಚಿಸಲಾಗಿದೆ. ಈ ಆನೆಗಳಿಂದ ಆನೆ ಬಾಗಿಲು ಎಂದು ಹೆಸರಾಗಿದೆ. ಬಾಗಿಲ ಮುಂಭಾಗದಲ್ಲಿ ಚೌಕಾಕಾರದ ಅಂಕಣವಿದ್ದು ಇದರ ಪೂರ್ವದಲ್ಲಿ ಮಹಾದ್ವಾರವನ್ನು ರಚಿಸಲಾಗಿದೆ. ಇತ್ತೀಚಿಗೆ ಈ ಬಾಗಿಲನ್ನು ಮುಚ್ಚಿ ಲಕ್ಷ್ಮೀನಾರಾಯಣ ದೇವಸ್ಥಾನವನ್ನಾಗಿ ಪರಿವರ್ತಿಸಲಾಗಿದೆ. ಚೌಕಾಕಾರದ ಅಂಕಣದಲ್ಲಿ ಹುಲಿಯ ಕಾಳಗ, ಗೂಳಿ ಕಾದಾಟ, ಟಗರು ಪಂದ್ಯಾಟ ಮುಂತಾದ ಕ್ರೀಡೆಗಳು ಹಿಂದೆ ನಡೆಯುತ್ತಿದ್ದವೆನ್ನಲಾಗಿದೆ. ಕೋಟೆಯ ಹನುಮ, ಸಂವೃಷ್ಠಿ ಆಂಜನೇಯ ಗುಡಿಗಳು ಈ ಅಂಕಣದಲ್ಲಿದೆ.

ದಕ್ಷಿಣ ಭಾಗದ ಲಾಲ್‌ಕೋಟೆ ಮಹಾದ್ವಾರವು ೨ ಬತೇರಿಗಳ ಮಧ್ಯೆ ಪ್ರವೇಶ ದ್ವಾರವನ್ನು ಹೊಂದಿದೆ. ಈ ಬಾಗಿಲನ್ನು ಅಕ್ಕತಂಗಿ ಜೋಡು ಬತೇರಿ ಬಾಗಿಲೆಂದು, ಪಾಳೆಗಾರರ ಆರಾಧ್ಯ ದೈವ ಅಹೋಬಲ ನರಸಿಂಹನ ಹೆಸರಿನಲ್ಲಿ ನರಸಿಂಹನ ಬಾಗಿಲೆಂದೂ ಕರೆಯುವರು. ಬತೇರಿ ಮುಂಭಾಗದಲ್ಲಿ ಇರುವ ಕಂದಕವನ್ನು ದಾಟಲು ಎಳೆಯುವ ಸೇತುವೆಯನ್ನು ತೂಗು ನಿರ್ಮಿಸಲಾಗಿದೆ. ಇಂದಿಗೂ ಅದರ ಅವಶೇಷಗಳು ಕಂಡುಬರುತ್ತವೆ. ಹಾಸುಗಲ್ಲಿನ ಮೇಲೆ ರೈಲ್ವೆ ಹಳಿಯಾಕಾರದ ಕಲ್ಲಿನ ಹಳಿಗಳಿವೆ. ಈ ಸೇತುವೆಯು ೩.೨ ಅಡಿ ಅಗಲ ೪.೨ ಅಡಿ ಉದ್ದವಿದೆ. ಜೋಡು ಬತೇರಿಗಳಲ್ಲಿ ವಿಶೇಷ ತಂತ್ರಜ್ಞಾನವನ್ನು ಅಳವಡಿಸಲಾಗಿದೆ. ಎಡ ಬತೇರಿಯಲ್ಲಿ ೨೪ ಕೋವಿ ಕಿಂಡಿಗಳು ಬಲ ಬತೇರಿಯಲ್ಲಿ ೨೨ ಕೋವಿ ಕಿಂಡಿಗಳಿವೆ. ಒಂದೊಂದು ಕೋವಿ ಕಿಂಡಿಗಳು ೩.೫ ಅಡಿ ಅಂತರದಿಂದ ೪ ಅಡಿ ಅಂತರದವರೆಗೆ ಇವೆ. ಈ ಕೋವಿ ಕಿಂಡಿಗಳನ್ನು ೧೩°ಯಲ್ಲಿ ನಿರ್ಮಿಸಿದ್ದಾರೆ. ಕೋವಿ ಕಿಂಡಿಗಳನ್ನು ವಿಶೇಷ ರೀತಿಯಲ್ಲಿ ಅಳವಡಿಸಿದ್ದಾರೆ. ಬತೇರಿಯ ಮೇಲೆ ಪಹರೆ ಗೃಹಗಳನ್ನು ನಿರ್ಮಿಸಿದ್ದಾರೆ. ಶಸ್ತ್ರಾಸ್ತ್ರಗಳನ್ನಿಡಲು ಬತೇರಿಯ ದಿಂಡುಗಳಲ್ಲಿ ಗೂಡುಗಳನ್ನು ಮಾಡಿದ್ದಾರೆ. ಬತೇರಿಗಳ ನಡುವೆ ಹಾದು ಒಳಗೆ ನಡೆದರೆ ಚೌಕಾಕಾರದ ಅಂಕಣವಿದೆ. ಈ ಅಂಕಣವು ೩೩ x ೨೭ ಅಳತೆಯಲ್ಲಿದೆ. ಸುತ್ತಲೂ ಇರುವ ಎತ್ತರದ ಗೋಡೆಯಲ್ಲಿ ೧೯ ಕೋವಿ ಕಿಂಡಿಗಳಿವೆ. ಹೊರಗಿನಿಂದ ನೇರವಾಗಿ ಬಂದ ಶತ್ರುಗಳನ್ನು ಸದೆ ಬಡಿಯಲು ವ್ಯವಸ್ಥಿತವಾಗಿ ಬತೇರಿ ಮತ್ತು ಬಾಗಿಲನ್ನು ನಿರ್ಮಿಸಲಾಗಿದೆ. ಅಂಕಣದ ಪಶ್ಚಿಮಕ್ಕೆ ಬಾಗಿಲಿದೆ. ಈ ಬಾಗಿಲನ್ನು ೭.೭ x ೯ x ೧೧ ಅಡಿಗಳಲ್ಲಿ ನಿರ್ಮಿಸಲಾಗಿದೆ. ಬಾಗಿಲ ಎರಡೂ ಭಾಗದಲ್ಲಿ ಕಾವಲುಗಾರರ ಚಾವಡಿಗಳಿವೆ. ಇಲ್ಲಿಂದ ಪಶ್ಚಿಮಕ್ಕೆ ಅನತಿ ದೂರದಲ್ಲಿ ಚಿಕ್ಕ ಸುರಂಗ ಮಾರ್ಗವಿದೆ. ಇದಕ್ಕೆ ಕತ್ತರಿ ಬಾಗಿಲೆಂದು ಕರೆಯುತ್ತಾರೆ. ಈ ಬಾಗಿಲು ೬ ಅಡಿ ಅಗಲ, ೮ ಅಡಿ ಎತ್ತರ ಮತ್ತು ೨೦ ಅಡಿ ಉದ್ದವಿದೆ. ಈ ಬಾಗಿಲು ೧೫ ಮೀ. ಅಗಲವಾಗಿರುವ ಕಂದಕಕ್ಕೆ ಪ್ರವೇಶ ಕಲ್ಪಿಸುತ್ತದೆ. ಈ ಕೋಟೆ ಸಾಲಿನಲ್ಲಿ ಅನೇಕ ಬುರುಜುಗಳು ಒಂದರ ಪಕ್ಕದಲ್ಲೊಂದು ನಿರ್ಮಾಣಗೊಂಡಿದೆ. ಒಂದೊಂದು ಬುರುಜುಗಳು ವಿರುದ್ಧ ದಿಕ್ಕಿನಲ್ಲಿದ್ದ ೭೦ ರಿಂದ ೧೨೦ ಮೀ ವಿಸ್ತೀರ್ಣ ಹೊಂದಿದೆ. ಬುರುಜುಗಳ ಮೇಲ್ಭಾಗದಲ್ಲಿ ಪಹರೆ ಗೂಡುಗಳಿವೆ. ಈ ಗೂಡುಗಳಿಂದ ಬೆಟ್ಟದ ಮೇಲಿರುವ ಮುಖ್ಯವಾದ ಕಾವಲು ಗೋಪುರಗಳಿಗೆ ವೀಕ್ಷಣಾ ಸಂಪರ್ಕವನ್ನು ಕಲ್ಪಿಸಲಾಗಿದೆ. ಈ ಬುರುಜುಗಳ ಮೇಲೆ ಫಿರಂಗಿಗಳನ್ನಿಡಲು ಅವಕಾಶವಿದೆ. ಈ ಫಿರಂಗಿಗಳನ್ನು ಇಡುವ ಸ್ಥಳವನ್ನು ೨೦° ಕೋನದಲ್ಲಿ ರಚಿಸಲಾಗಿದೆ. ಇದೇ ರೀತಿ ಸುಮಾರು ೫೦ಕ್ಕೂ ಹೆಚ್ಚು ಫಿರಂಗಿ ಸ್ಥಳಗಳಿವೆ (ತಿಪ್ಪೇಸ್ವಾಮಿ ೨೦೦೪:೧೭೫–೧೮೩).

ಹೊರಸುತ್ತಿನ ಕೋಟೆಯ ವಾಯುವ್ಯ ದಿಕ್ಕಿನಲ್ಲಿ ದ್ವಾರಕ್ಕೆ ಉಚ್ಚಂಗೆಮ್ಮ ಅಥವಾ ಉತ್ಸಾವಾಂಬ ಬಾಗಿಲೆಂದು ಕರೆಯುತ್ತಾರೆ. ಉಚ್ಚಂಗೆಮ್ಮ ಪಾಳೆಯಗಾರರ ಮನೆದೇವತೆಯಾಗಿದೆ. ಹೊರಭಾಗದಲ್ಲಿ

ಪಾಳೆಗಾರ ಹಿರೇಮದಕರಿ ನಾಯಕನು ಕಟ್ಟಿಸಿರುವ ಸಿಹಿ ನೀರಿನ ಹೊಂಡವಿದೆ. ಸ್ಥಳೀಯರು ಸಿಹಿ ನೀರಿನ ಹೊಂಡದ ಬಾಗಿಲೆಂದೇ ಕರೆಯುತ್ತಾರೆ. ಇಲ್ಲಿಂದ ಬಲವಾದ ಕೋಟೆಗೋಡೆಯು ಬೆಟ್ಟದ ಪಶ್ಚಿಮ ಭಾಗವನ್ನು ಸುತ್ತಿಕೊಂಡು ದಕ್ಷಿಣಕ್ಕೆ ಹನುಮನ ಬಾಗಿಲ ಮೂಲಕ ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟದವರೆಗೂ ಹೋಗಿದೆ. ಈ ಸುತ್ತಿನ ಕೋಟೆಯು ೧೫.೫ ಅಡಿ ಅಗಲವಿದ್ದು, ೨೮ ಅಡಿ ಎತ್ತರವಿದೆ. ಹೊರಮೈಗೆ ೫೩ ಇಂಚು ಉದ್ದದ ೧೯ ಇಂಚು ದಪ್ಪನಾದ ಕಲ್ಲುಗಳನ್ನು ಬಳಸಿ ಒಂದು ಕಲ್ಲು ಮತ್ತೊಂದರ ಜೊತೆಗೆ ಸರಿಯಾಗಿ ಹೊಂದಿಕೊಳ್ಳುವಂತೆ ಸಂದುಗಳಿಲ್ಲದೆ ಕಟ್ಟಲಾಗಿದೆ. ಇಂತಹ ದೊಡ್ಡಕಲ್ಲುಗಳನ್ನು ಬಹಳ ಜಾಣ್ಮೆಯಿಂದ ಆಯತಾಕಾರದ ಕಲ್ಲು ಬದುಗೆ ಉಪಯೋಗಿಸಲಾಗಿದೆ. ಇವುಗಳ ಹೊರಭಾಗ ಚೌಕಾಕಾರವಾಗಿದ್ದು ಒಳಭಾಗ ಚೂಪಾಗಿರುತ್ತದೆ. ಒಳಭಾಗದಲ್ಲಿ ಕಲ್ಲುಗಳ ಮಧ್ಯದ ಸಂದುಗಳನ್ನು ಸಣ್ಣಕಲ್ಲು ಮತ್ತು ಮಣ್ಣಿನಿಂದ ತುಂಬಲಾಗಿದೆ. ಕೋಟೆಗೋಡೆಯ ಭದ್ರತೆಯನ್ನು ಹೆಚ್ಚಿಸುವ ಸಲುವಾಗಿ ಅಲ್ಲಲ್ಲಿ ಚೌಕಾಕಾರದ ಕೊತ್ತಲುಗಳನ್ನು ನಿರ್ಮಿಸಲಾಗಿದೆ. ಈ ಕೊತ್ತಲಗಳು ಚೌಕಾಕಾರದಲ್ಲಿ ಮುಂದೆ ಚಾಚಿಕೊಂಡಿರುವ ಕೋಟೆಗೋಡೆಯ ಭಾಗಗಳಾಗಿವೆ. ಯುದ್ಧದ ಸಮಯದಲ್ಲಿ ಹೆಚ್ಚು ಸೈನಿಕರು ನಿಲ್ಲಲು ಕೊತ್ತಲಗಳು ಉಪಯೋಗವಾಗುತ್ತವೆ. ಈ ಗೋಡೆಯ ಮೇಲ್ಭಾಗದಲ್ಲಿ ೮ ಅಡಿ ಎತ್ತರ ೮ ಅಡಿದಪ್ಪದ ಮಣ್ಣಿನ ಕೋಟೆಯಿದ್ದ ಕೋವಿ ಕಿಂಡಿಗಳಿವೆ. ಒಂದೊಂದು ಕೋವಿ ಕಿಂಡಿಗಳನ್ನು ೩ ದಿಕ್ಕುಗಳ ಗುರಿಯನ್ನಿಟ್ಟು ರಚಿಸಲಾಗಿದೆ. ಹೊರಕೋಟೆಯ ಹಿಂಭಾಗ ೨೮ ಅಗಲದ ಸೈನಿಕರು ನಡೆದಾಡುವ ವೇದಿಕೆ ಅಥವಾ ಅಟ್ಟಾಲಕವನ್ನು ರಚಿಸಲಾಗಿದೆ.

ಈ ಹೊರಸುತ್ತಿನ ಕೋಟೆಯ ಬಾಗಿಲು ಹನುಮನ ಬಾಗಿಲೆಂದು ಕರೆಯುತ್ತಾರೆ. ಇದು ಇಕ್ಕಟ್ಟಾದ ಕಣಿವೆ ಭಾಗದಲ್ಲಿ ನಿರ್ಮಿತವಾಗಿದ್ದು, ವೇದಿಕೆಯ ಮೇಲೇರಲು ಅಲ್ಲಲ್ಲಿ ಮೆಟ್ಟಿಲುಗಳಿವೆ. ಹನುಮನ ಬಾಗಿಲ ಬಳಿ ಇರುವ ಬುರುಜು ೩೦ ಅಡಿ ಎತ್ತರವಾಗಿದ್ದು ಬುರುಜಿಗೆ ೫೮ x ೪೫ ಇಂಚಿನ ಕಲ್ಲುಗಳನ್ನು ಬಳಸಲಾಗಿದೆ. ಬಾಗಿಲಿನ ಪಕ್ಕದಲ್ಲಿ ಹಾಗೂ ಬಾಗಿಲಿನ ಮೇಲೆ ವಿಶೇಷವಾದ ರಕ್ಷಣಾ ವ್ಯವಸ್ಥೆ ಮಾಡಲಾಗಿದೆ. ಈ ದ್ವಾರದ ಸನಿಹದಲ್ಲೇ ವೀರವನಿತೆ ಓಬವ್ವಳ ಸಾಹಸ ತೋರಿದ ಒನಕೆ ಕಿಂಡಿಯಿದೆ. ಈ ಕಿಂಡಿಯ ಉತ್ತರಕ್ಕೆ ಫಲ್ಗುಣೇಶ್ವರ ದೇವಾಲಯದ ಸಮೀಪದಲ್ಲಿ ಹೊರ ಕೋಟೆಗೆ ಒಂದು ದಿಡ್ಡಿ ಬಾಗಿಲಿನ ಮುಂಭಾಗ ದೊಡ್ಡಗುಂಡು ಬಂಡೆಯೊಂದರ ಕೆಳಗೆ ವ್ಯವಸ್ಥಿತವಾದ ಗವಿ ಇದೆ.

೬ ಮತ್ತು ೭ ಸುತ್ತಿನ ಕೋಟೆಯ ಮಧ್ಯಂತರದಲ್ಲಿ ಅನೇಕ ಸ್ಮಾರಕಗಳಿವೆ. ಇಂದು ಚಿಕ್ಕಪೇಟೆ, ದೊಡ್ಡಪೇಟೆಗಳ ಮತ್ತು ರಸ್ತೆಗಳು ಪಾಳೆಯಗಾರರ ಅವಧಿಯಲ್ಲಿ ಸೂರ್ಯಬೀದಿ, ಚಂದ್ರಬೀದಿಗಳಾಗಿದ್ದವೆಂದು ಹೇಳಲಾಗಿದೆ. ಈ ಎರಡು ಬೀದಿಗಳು ಕೂಡುವ ಸ್ಥಳದಲ್ಲಿ ಪಾಳೆಯಗಾರರ ಮನೆದೇವತೆ ಶ್ರೀ ಉತ್ಸವಾಂಬ ದೇವಾಲಯವಿದೆ. ಅಲ್ಲದೆ ಬಸವೇಶ್ವರ,

ಪಾತಾಳೇಶ್ವರ, ಜುಮ್ಮಾ ಮಸೀದಿ, ಆಂಜನೇಯ ಅಂತರಗಟ್ಟಮ್ಮ, ತಿಪ್ಪೇರಘಟ್ಟಮ್ಮ, ಕೂಡಲಿ ಶೃಂಗೇರಿಮಠ, ಉಮಾಮಹೇಶ್ವರಿ ಮುಂತಾದ ದೇವಾಲಯಗಳು ಹಾಗೂ ಗರಡಿ ಮನೆಗಳಿವೆ (ಗಿರಿಜ ೧೯೯೧:೨೧).

## ಕೋಟೆಯ ದ್ವಾರಬಾಗಿಲುಗಳು

ಕರೀಗೌಡ ಬೀಚನಹಳ್ಳಿ, ಕರಕುಶಲ ಕಲೆಗಳು, ೨೦೦೦ ಹಾಗೂ ತಿಪ್ಪೇಸ್ವಾಮಿ ಎಂ.ಎಸ್. ಅವರ ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ ಎಂಬ ಲೇಖನಗಳಲ್ಲಿ ಪ್ರಸ್ತಾಪಿಸಿರುವಂತೆ "ಊರಲ್ಲಿ ಕೊಳ್ಳೆ ಹೊಡೆದ ಮೇಲೆ ಊರಬಾಗಿಲು ಹಾಕಿದಂತೆ" ಎನ್ನುವ ಗಾದೆಮಾತು ದ್ವಾರಬಾಗಿಲು ಅಥವಾ ಊರಬಾಗಿಲುಗಳ ಪ್ರಾಮುಖ್ಯತೆಯನ್ನು ಸಾರುತ್ತದೆ. ಕೋಟೆಗಳಲ್ಲಿ ಇಂತಹ ಬಾಗಿಲುಗಳು ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ಕೋಟೆಗೆ ಆಗಮನ ಮತ್ತು ನಿರ್ಗಮನಗಳೆರಡೂ ಹೆಬ್ಬಾಗಿಲು/ದ್ವಾರಬಾಗಿಲುಗಳ ಮೂಲಕವಾದ್ದರಿಂದ ಬಾಗಿಲುಗಳ ರಚನೆಗೆ ಹೆಚ್ಚು ಒತ್ತು ನೀಡುವುದು ಅನಿವಾರ್ಯವಾಗಿತ್ತು. ಹೆಬ್ಬಾಗಿಲುಗಳಿರುತ್ತಿದ್ದ ಕೋಟೆ ಗೋಡೆಯ ಗಾತ್ರ ಮತ್ತು ವಿಸ್ತಾರದಲ್ಲಿ ಹೆಚ್ಚಿರುವುದು ಸಾಮಾನ್ಯವಾಗಿದೆ. ವಿವಿಧ ದಿಕ್ಕುಗಳಿಂದ ಪ್ರವೇಶ ಮಾಡದಂತೆ ಬಾಗಿಲುಗಳನ್ನು ನಿರ್ಮಿಸಲಾಗುತ್ತಿತ್ತು. ಬಾಗಿಲುಗಳು ನೋಡಲು ನೇರವಾಗಿದ್ದಂತೆ ಕಂಡುಬಂದರೂ ವಿರುದ್ಧ ದಿಕ್ಕಿನಲ್ಲಿರುತ್ತಿದ್ದವು. ಹಾಗೂ ಬಾಗಿಲುಗಳ ಅಗಲ, ಉದ್ದ ಮತ್ತು ಎತ್ತರಗಳಲ್ಲಿ ವಿಶಿಷ್ಟ ವಿನ್ಯಾಸ ತಂತ್ರಗಳನ್ನು ಅಳವಡಿಸಿರುತ್ತಾರೆ (ಬೀಚನಹಳ್ಳಿ ೨೦೦೦:೨೬ ; ತಿಪ್ಪೇಸ್ವಾಮಿ ೨೦೦೪:೨೬೭).

ಚಿತ್ರದುರ್ಗ ಕೋಟೆಯಲ್ಲಿರುವ ಬಾಗಿಲುಗಳು ಒಂದೊಂದು ರೀತಿಯ ವಿನ್ಯಾಸ ಹೊಂದಿವೆ. ಈಗಿನ ಮುಖ್ಯ ಪ್ರವೇಶ ದ್ವಾರಬಾಗಿಲ ಕಾಮನ ಬಾಗಿಲನ್ನು ಹುಲಿಮುಖದ ಬಾಗಿಲು ಎಂದು ಕರೆಯುತ್ತಾರೆ. ಇದರ ನಂತರ ಸಿಗುವ ಬಾಗಿಲು ಜಾಗಟೆ ಬಾಗಿಲು, ಹಾಗೂ ಐದನೇ ಸುತ್ತಿನ ಬಾಗಿಲಿಗೆ ಗಂಟೆಯ ಬಾಗಿಲೆಂದು ಕರೆಯುತ್ತಿದ್ದರು. ೬ನೆಯದು ಟೀಕಿನ ಬಾಗಿಲು/ಕಸ್ತೂರಿ ರಂಗಪ್ಪನ ಬಾಗಿಲೆಂಬ ಹೆಸರಿದೆ.

ಚಿತ್ರದುರ್ಗದ ಹೊರಕೋಟೆಯ ಲಾಲ್‌ಗಡದ ಬತೇರಿಯ ಬಾಗಿಲನ್ನು ವಿಶೇಷ ರಕ್ಷಣಾ ಚಾತುರ್ಯದಿಂದ ನಿರ್ಮಿಸಲಾಗಿದೆ. ಕಂದಕದ ಬಳಿ ೨ ಬೃಹದಾಕಾರವಾದ ಬತೇರಿಗಳ ಮಧ್ಯೆ ಸ್ವಾಭಾವಿಕ ದಾರಿಯನ್ನು ಕಲ್ಪಿಸಲಾಗಿದೆ. ಬತೇರಿಗಳ ಮುಂದಿರುವ ಕಂದಕಕ್ಕೆ ತೂಗು ಸೇತುವೆಯನ್ನು ಅಳವಡಿಸಿದ್ದುದನ್ನು ಅಲ್ಲಿನ ಅವಶೇಷಗಳೆಂದು ಗುರುತಿಸಬಹುದು. ಹೀಗೆ ಇಲ್ಲಿ ಶತ್ರುಗಳನ್ನು ೩ ರೀತಿಯಲ್ಲಿ ದಾರಿ ತಪ್ಪಿಸಿ ಅವರನ್ನು ತೊಂದರೆಗೆ ಸಿಲುಕಿಸಿ ಶಿಕ್ಷೆಗೆ ಒಳಪಡಿಸುವ ತಂತ್ರದಿಂದ ಈ ದ್ವಾರಗಳನ್ನು ನಿರ್ಮಿಸಲಾಗಿರುತ್ತದೆ.

**ಬುರುಜು ಮತ್ತು ಕಂದಕಗಳು**

ಲಕ್ಷ್ಮಣ್ ತೆಲಗಾವಿ ಹಾಗೂ ವೆಂಕಣ್ಣಚಾರ್ ಕೆ. ಜೊತೆಗೂಡಿ ಬರೆದ ಚಿತ್ರದುರ್ಗ ದರ್ಶಿನಿ, ೧೯೮೦ ಎಂಬ ಲೇಖನವು ಹೇಳುವಂತೆ ಕೋಟೆಯ ಪ್ರಕಾರದ ಮೇಲೂ ಗೋಪುರದ ತುದಿಯಲ್ಲಿ ಕಟ್ಟುವ ಮತ್ತೊಂದು ವರ್ತುಲಾಕಾರದ ಮೇಲಿನ ಕಟ್ಟಡವೇ ಬುರುಜುಗಳಾಗಿವೆ. ಹಾಗೂ ಕೋಟೆ ಗೋಡೆಯ ಮೇಲಿನ ಬುರುಜನ್ನೇ ಕೊತ್ತಳವೆಂದು ಕರ್ನಾಟಕ ವಾಸ್ತುಶಿಲ್ಪದಲ್ಲಿ ಕರೆಯಲಾಗಿದೆ. ಕೆಲವು ಕಡೆ ಬುರುಜು, ಬತೇರಿ, ಕೊತ್ತಲಗಳನ್ನು ಒಂದೇ ಅರ್ಥದಲ್ಲಿ ಬಳಸಲಾಗಿದೆ. ಕೋಟೆಗೋಡೆಯ ಹೊರಭಾಗಕ್ಕೆ ನಾಲಿಗೆಯಾಕಾರದಲ್ಲಿ ಚಾಚಿಕೊಂಡಿರುವ ಭಾಗವೇ ಬುರುಜು. ಇವುಗಳು ಸಾಮಾನ್ಯವಾಗಿ ವೃತ್ತಾಕಾರ ಮತ್ತು ಚೌಕಾಕಾರವಾಗಿರುತ್ತದೆ. ಒಂದು ಬುರುಜಿಗೂ ಮತ್ತೊಂದು ಬುರುಜಿಗೂ ಅಳತೆಯಲ್ಲಿ ವ್ಯತ್ಯಾಸವಿದೆ. ಜೊತೆಗೆ ತ್ರಿಕೋನ, ಚತುಷ್ಕೋನ, ಪಂಚಕೋನ, ವರ್ತುಲಾಕಾರದ ಬುರುಜುಗಳಿವೆ. ಕೋಟೆಯ ಪ್ರಕಾರವು ಹೆಚ್ಚು ವಿಸ್ತಾರವಾದಂತೆ ಬುರುಜುಗಳ ಸಂಖ್ಯೆಯನ್ನು ಹೆಚ್ಚಿಸಲಾಗಿರುತ್ತದೆ. ಈ ರೀತಿಯ ಬುರುಜುಗಳು ಕೋಟೆ ಗೋಡೆಗೆ ಭದ್ರತೆಯನ್ನು ಒದಗಿಸುತ್ತಿದ್ದವು. ಅಲ್ಲದೆ ಬುರುಜುಗಳು ೪೦ ರಿಂದ ೬೦ ಮೀ. ಸುತ್ತಳತೆಯನ್ನು ಹೊಂದಿದ್ದು, ಎಲ್ಲಾ ಬುರುಜುಗಳಲ್ಲಿಯೂ ಬಂದೂಕು ಕಿಂಡಿಗಳಿವೆ. ಮೊದಲು ನಿರ್ಮಾಣಗೊಂಡಿದ್ದು, ಕಲ್ಲಿನ ಬುರುಜುಗಳ ಮೇಲೆ ೧೦ ಅಡಿ ಎತ್ತರದವರೆಗೆ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ಬುರುಜುಗಳನ್ನು ಸುಂದರಗೊಳಿಸಿದ್ದಾರೆ.

ಕೋಟೆಯ ಹೊರಭಾಗದ ಸುತ್ತಲೂ ಕೆರೆಯಂತೆ ಕಾಣುವ, ತಗ್ಗಾದ ಪ್ರದೇಶಕ್ಕೆ ಕಂದಕ ಎಂದು ಹೆಸರು. ಇದಕ್ಕೆ ಪರಖೆ, ಅಗಳು ಎಂತಲೂ ಕರೆಯುತ್ತಾರೆ. ಇವುಗಳ ಕೋಟೆಯ ಹೊರಭಾಗದಲ್ಲಿ ಆಳವಾದ ತಗ್ಗನ್ನು ತೋಡಿ, ವಿಷಯುಕ್ತ ಜಲಚರಗಳನ್ನು ಬಿಡುವ ಮೂಲಕ ಶತ್ರುಗಳಿಗೆ ತಡೆಯೊಡ್ಡುತ್ತಿದ್ದರು. ಇಂತಹ ಕಂದಕಗಳನ್ನು ಹೆಚ್ಚಾಗಿ ಸ್ಥಳದುರ್ಗಗಳಲ್ಲಿ ನಿರ್ಮಿಸಿರುವುದನ್ನು ಕಾಣುತ್ತೇವೆ. ಇವುಗಳು ಚಿತ್ರದುರ್ಗ ಕೋಟೆಯ ಪೂರ್ವ ದಿಕ್ಕಿನಲ್ಲಿ ನೆಲಮಟ್ಟದಲ್ಲಿರುವ ಎರಡು ಸುತ್ತಿನ ಕೋಟೆಗೆ ೪೦ ರಿಂದ ೧೦೦ ಅಡಿ ಅಗಲದವರೆಗೆ ನಿರ್ಮಿಸಿರುವ ಕಂದಕಗಳು ಕೆರೆಯೋಪಾದಿಯಲ್ಲಿವೆ. ಇಂತಹ ಕಂದಕಗಳಲ್ಲಿ ಕನಿಷ್ಟ ೨೦ ಅಡಿ ನೀರು ನಿಲ್ಲುವ ವ್ಯವಸ್ಥೆಯಿರುತ್ತದೆ. ಕಂದಕಗಳಲ್ಲಿ ನೀರು ಸರಾಗವಾಗಿ ಹೋಗಲು ಎರಡು ಬದಿಗಳಲ್ಲಿ ಕಲ್ಲಿನ ಕಟ್ಟಡಗಳನ್ನು ನಿರ್ಮಿಸುತ್ತಿದ್ದರು. ಕೋಟೆಯ ಪಶ್ಚಿಮ ಭಾಗದಲ್ಲಿ ಇಳಿಜಾರಾಗಿರುವ ಬೆಟ್ಟಕ್ಕೆ ಕಂದಕ ನಿರ್ಮಿಸಿದ್ದಾರೆ. ಗಿರಿದುರ್ಗದಲ್ಲಿರುವ ಈ ಕಂದಕ ೩೦ ಅಡಿ ಅಗಲ ೩೦ ಅಡಿ ಎತ್ತರವಾಗಿದೆ. ೩ ಬದಿಯಲ್ಲಿ ಕಡಿದಾದ ಕಲ್ಲಿನ ಕಟ್ಟಡವನ್ನು ನಿರ್ಮಿಸಲಾಗಿದೆ. ಈ ಕಂದಕವು ನೀರು ನಿಲ್ಲುವಂತಹ ವ್ಯವಸ್ಥೆಯಾಗಿರಲಿಲ್ಲ. ಕಾರಣ ಬೆಟ್ಟದ ಇಳಿಜಾರು ಪ್ರದೇಶ ಇದಾಗಿದ್ದು, ಈ ಕಂದಕದಲ್ಲಿ ನೀರು ನಿಲ್ಲುವ ಪ್ರಶ್ನೆಯೇ ಇರುತ್ತಿರಲಿಲ್ಲ. ಇಳಿಜಾರಾಗಿರುವ

ಬೆಟ್ಟದಲ್ಲಿ ಸುಲಭವಾಗಿ ಶತ್ರುಗಳು ನುಗ್ಗಬಹುದೆಂದು ಉದ್ದೇಶವನ್ನಿಟ್ಟುಕೊಂಡು ಈ ರೀತಿಯ ಕಂದಕವನ್ನು ನಿರ್ಮಿಸಿರಬಹುದಾಗಿದೆ. ಹಾಗೂ ಬೆಟ್ಟದ ಮೇಲಿನಿಂದ ಬರುವ ನೀರು ಸರಾಗವಾಗಿ ಕಂದಕದ ಮುಖಾಂತರ ಹರಿದು ಮುಂದೆ ನಿರ್ಮಿಸಿರುವ ಹೊಂಡಕ್ಕೆ ಸೇರುತ್ತಿತ್ತು (ತೆಲಗಾವಿ, ವೆಂಕಣ್ಣಾಚಾರ್ ೧೯೮೦:೨೭).

### ಕಾವಲು ಗೋಪುರಗಳು

ಶತ್ರುಗಳನ್ನು ದೂರದಿಂದಲೇ ವೀಕ್ಷಿಸಿ ಅಪಾಯದ ಸಂಕೇತಗಳನ್ನು ರಾಜನಿಗೆ ತಲುಪಿಸಲು ಮಾಡಿಕೊಂಡ ವ್ಯವಸ್ಥೆಗಳೇ ಕಾವಲು ಗೋಪುರಗಳು. ಇವುಗಳಿಗೆ ಬುರುಜು, ಬತೇರಿ, ತವಗ, ಹುಡೇವು ಎಂಬೆಲ್ಲಾ ಹೆಸರುಗಳಿವೆ. ಕೋಟೆಯ ಬುರುಜುಗಳ ಮೇಲೆ ವೃತ್ತಾಕಾರವಾಗಿ ಎತ್ತರವಾದ ಕಾವಲುಗೋಪುರಗಳನ್ನು ರಚಿಸುತ್ತಿದ್ದರು. ಈ ಕಾವಲುಗಳು ಸಂಪರ್ಕ ಸೇತುವೆಯಂತೆ ಕಾರ್ಯ ನಿರ್ವಹಿಸುತ್ತಿದ್ದವು. ರಾಜಧಾನಿಯಿಂದ ದೂರವಿರುತ್ತಿದ್ದ ಗಡಿಕೋಟೆಗಳ ಮಧ್ಯಭಾಗದಲ್ಲಿ ಎತ್ತರವಾದ ಕಾವಲು ಗೋಪುರಗಳನ್ನು ನಿರ್ಮಾಣ ಮಾಡಿದ್ದಾರೆ. ಕಾವಲು ಗೋಪುರಗಳಿಗೆ ರಾಜರು ಶಸ್ತ್ರ ಸಜ್ಜಿತ ಸೈನಿಕರ ತುಕಡಿಗಳನ್ನು ಇಟ್ಟಿರುತ್ತಿದ್ದರಲ್ಲದೆ, ಇವುಗಳನ್ನು ಕೂಡ ಒಂದು ಕೋಟೆಯೆಂದೇ ಪರಿಗಣಿಸುತ್ತಿದ್ದರು. ಸಾಮಾನ್ಯವಾಗಿ ಕಾವಲು ಗೋಪುರಗಳು ವೃತ್ತಾಕಾರವಾಗಿವೆ. ಆದರೂ ಕೆಲವು ಚೌಕಾಕಾರವಾಗಿರುವುದನ್ನು ನೋಡಬಹುದಾಗಿದೆ. ಕೋಟೆಗೋಡೆಗೆ ಬಳಸುವ ಕಲ್ಲುಗಳನ್ನು ಇವುಗಳಿಗೂ ಬಳಸಿಕೊಂಡು, ಸು. ೩೦ ರಿಂದ ೫೦ ಅಡಿ ಎತ್ತರದವರೆಗೆ ನಿರ್ಮಿಸಿದ್ದು, ೫೦ ರಿಂದ ೬೫ ಮೀಟರ್ ವಿಸ್ತೀರ್ಣವನ್ನು ಹೊಂದಿವೆ. ಕೆಲವು ಕಾವಲು ಗೋಪುರಗಳಿಗೆ ಮೆಟ್ಟಿಲುಗಳಿದ್ದರೆ ಮತ್ತೆ ಕೆಲವು ಯಾವುದೇ ಮೆಟ್ಟಿಲುಗಳಿಲ್ಲ. ಕೆಳಭಾಗದಲ್ಲಿ ೫ ರಿಂದ ೧೦ ಅಡಿ ಎತ್ತರದವರೆಗೆ ಭಾರೀ ಗಾತ್ರದ ಕಲ್ಲುಗಳನ್ನು ಬಳಸಿ ಸುತ್ತಲೂ ವೇದಿಕೆಯನ್ನು ನಿರ್ಮಿಸಿ ಅದರ ಮೇಲೆ ಕಾವಲು ಗೋಪುರಗಳನ್ನು ಕಟ್ಟಲಾಗಿದೆ. ಮೇಲಿನಿಂದ ಇಳಿಯುವವರು ಏಣಿಯನ್ನು ಬಳಸಲು ಸಾಧ್ಯವಿತ್ತು. ಪುನಃ ಮೇಲೆ ಹತ್ತಲು ಮೇಲಿನವರ ಸಹಾಯ ಪಡೆದೇ ಹತ್ತಬೇಕಿದ್ದಿತು. ಗೋಪುರಗಳ ಸುತ್ತಲೂ ಕಂದಕವಿದ್ದು, ಕೋಟೆಗೆ ಏರ್ಪಡಿಸುತ್ತಿದ್ದ ವ್ಯವಸ್ಥೆಯನ್ನು ಇಲ್ಲಿ ಏರ್ಪಡಿಸಲಾಗುತ್ತಿತ್ತು (ತಿಪ್ಪೇಸ್ವಾಮಿ ೨೦೦೪:೨೭೪-೨೭೭).

ಒಟ್ಟಿನಲ್ಲಿ ಈ ಕಾವಲು ಗೋಪುರಗಳನ್ನು ಕೋಟೆಗೆ ಲಗ್ಗೆ ಹಾಕಲು ಬರುವ ಶತ್ರುಗಳ ಮುನ್ಸೂಚನೆಯನ್ನು ಅರಿತು ದುರ್ಗದೊಳಗಿರುವವರಿಗೆ ತಿಳಿಸಿ ಶತ್ರುಗಳನ್ನು ಎದುರಿಸಲು ಯೋಧರು ಸಿದ್ಧರಾಗುವಂತೆ ಸೂಚನೆಯನ್ನು ಕೊಡುವುದರ ಸಲುವಾಗಿ ನಿರ್ಮಿಸಲಾಗುತ್ತಿತ್ತು. ಈ ಕಾವಲು ಗೋಪುರ ಮೇಲೆ ವಿಶೇಷ ತರಬೇತಿಯುಳ್ಳ ಕಾವಲುಗಾರರನ್ನು ನೇಮಿಸುತ್ತಿದ್ದರು.

### ಗರಡಿಮನೆಗಳು

ರಾಜಶೇಖರಪ್ಪ ಬಿ., ಗರಡಿಮನೆಗಳು, ೧೯೯೫ ಹಾಗೂ ತಿಪ್ಪೇಸ್ವಾಮಿ ಎಂ.ಎಸ್. ಅವರ

ರಕ್ಷಣಾ ವಾಸ್ತುಶಿಲ್ಪ : ಚಿತ್ರದುರ್ಗ ಜಿಲ್ಲೆ ಎಂಬ ಲೇಖನಗಳ ಹೇಳಿಕೆಯ ಪ್ರಕಾರ ಕೋಟೆಯ ಅಂಗಭಾಗಗಳಲ್ಲಿ ಗರಡಿಮನೆಗಳು ತುಂಬಾ ಪ್ರಾಮುಖ್ಯತೆ ಪಡೆದುಕೊಂಡಿವೆ. ಉತ್ತಮ ಸೈನಿಕರನ್ನು ಸಿದ್ಧಗೊಳಿಸುತ್ತಿದ್ದ ಸೈನಿಕ ಶಾಲೆಗಳೇ ಗರಡಿಮನೆಗಳು. ಯಾವುದೇ ಆಯುಧಗಳನ್ನು ಬಳಸದೇ ತಮ್ಮ ದೈಹಿಕ ಶಕ್ತಿ ಸಾಮಾರ್ಥ್ಯದ ಮೂಲಕ ಹೋರಾಡಿ ಗೆಲ್ಲುವ ಕ್ರೀಡೆಗಳನ್ನು ಇಲ್ಲಿ ನಡೆಸಲಾಗುತ್ತಿತ್ತು. ಈ ಗರಡಿ ಕಲೆ ಸಂಪ್ರದಾಯ, ಆಯುಧ ರಹಿತ ಸಮಯದಷ್ಟೇ ಪ್ರಾಚೀನತೆಯನ್ನು ಪಡೆದುಕೊಂಡಿದೆ. ಇದಕ್ಕೆ ಸಂಬಂಧಿಸಿದಂತೆ ವಿಜಯನಗರ ಸಮಕಾಲೀನ ಕಾವ್ಯಗಳಾದ ರಾಮನಾಥ ಚರಿತ, ಚೆನ್ನಬಸವ ಪುರಾಣಗಳು, ಸೈನಿಕ ತರಬೇತಿಯ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ಗರಡಿಮನೆಯಲ್ಲಿ ತರಬೇತಿ ಪಡೆದು ಜಯಗಳಿಸಿದವರನ್ನು ಜಟ್ಟಿ/ಪೈಲ್ವಾನ್‌ಗಳೆಂದು ಕರೆಯುತ್ತಿದ್ದರು. ಕೋಟೆಗೇರುವ ಬಗೆಬಗೆಯ ಬಂಡೆಗಳನ್ನು ಹತ್ತುವ, ಬರಿಗಾಲಲ್ಲಿ ಎಣ್ಣೆ ಹಚ್ಚಿ ಜಾರುವ, ಕಾಲನ್ನು ಏರಿಳಿಯುವ ತರಬೇತಿ, ಯುದ್ಧಾಸ್ತ್ರಗಳಲ್ಲಿ ತಯಾರಿ, ಅಶ್ವರೋಹಣ, ಗಜರೋಹಣ, ಕಾಡುಮೃಗಗಳೊಂದಿಗೆ ಹೋರಾಟ, ಆನೆ, ಕುದುರೆಗಳೊಂದಿಗೆ ಹೋರಾಡುವ ತರಬೇತಿಯನ್ನು ಇಲ್ಲಿ ನೀಡಲಾಗುತ್ತಿತ್ತು. ಅಲ್ಲದೇ ಗುದುಗತ್ತಿ, ಬಾಕು, ಕಠಾರಿ, ಕೋವಿಗಳನ್ನು ಹಿಡಿದು ಹೋರಾಡುವಂತಹ ರಣಶಿಕ್ಷಣವನ್ನು ಕೊಡುತ್ತಿದ್ದರು. ಇವುಗಳಲ್ಲಿ ಕೆಲವನ್ನು ಗರಡಿಮನೆಗಳಲ್ಲಿ ತರಬೇತಿ ನೀಡಿದರೆ ಮತ್ತೆ ಕೆಲವನ್ನು ಬಯಲು ಪ್ರದೇಶದಲ್ಲಿ ನೀಡುತ್ತಿದ್ದರು.

ಚಿತ್ರದುರ್ಗದ ಕೋಟೆಯ ಸಿದ್ಧಯ್ಯನ ಬಾಗಿಲ ಮುಂಭಾಗ ವಿಶಾಲವಾದ ಚೌಕಾಕಾರದ ಅಂಕಣದಲ್ಲಿ ವಿವಿಧ ಮಲ್ಲ ಕ್ರೀಡೆಗಳು ನಡೆಯುತ್ತಿದ್ದವೆನ್ನಲಾಗಿದೆ. ಗೋಪಾಲಸ್ವಾಮಿ ಹೊಂಡದ ಜಾರುಬಂಡೆಯ ಬಂಡೆಯನ್ನೇರುವ ಕ್ರೀಡೆಗಳ ತರಬೇತಿ ತಾಣವಾಗಿತ್ತು. ಇಂತಹ ಕ್ರೀಡೆಗಳಾಡುವ ಯುವಕರಿಗೆ ಸಾವಿನೊಂದಿಗೆ ಸೆಣಸುವ ಗಂಡೆದೆಯು ಬೇಕಾಗಿರುತ್ತಿತ್ತಂತೆ. ಕೋಟೆಯನ್ನು ಸದಾ ಸಂರಕ್ಷಿಸುವ ಕೋಟಾಗಾರರು ಸಂಸ್ಥಾನದ ಸೈನ್ಯಕ್ಕೆ ಎಲ್ಲಿಲ್ಲದ ಬಲ ತುಂಬುತ್ತಿದ್ದರು. ಧೈರ್ಯ, ಸಾಹಸ, ಶೌರ್ಯಕ್ಕೆ ಇನ್ನೊಂದು ಹೆಸರು ಕೋಟಾಗಾರರಾಗಿದ್ದರು. ಪ್ರತಿಯೊಬ್ಬರು ಒಂದೊಂದು ರೇಶಿಮೆ ಹಗ್ಗಗಳನ್ನು ಹೊಂದಿ ಯುದ್ಧಕ್ಕೆ ಇಳಿಯುತ್ತಿದ್ದರು. ರಾಜನ ರಕ್ಷಕರಾದ ಇವರಿಗೆ ಬಿಚ್ಚುಗತ್ತಿ ಬೇಡರ ಕಾವಲು ಬೇಕಿದ್ದಿತು. ಗರಡಿ ಕಲೆಗಳಲ್ಲಿ ಮಲ್ಲಯುದ್ಧವು ಹೆಚ್ಚು ಪ್ರಖ್ಯಾತಿ ಪಡೆದುಕೊಂಡಿದ್ದಿತು. ಇದು ಪ್ರಾಚೀನ ಕಾಲದ ೬೪ ವಿದ್ಯೆಗಳಲ್ಲಿ ಅತಿ ಪ್ರಾಮುಖ್ಯವಾದ ಯುದ್ಧ ತಂತ್ರವಾಗಿದೆ. ಚಿತ್ರದುರ್ಗ ಬೆಟ್ಟದ ಮೇಲೆ ಮತ್ತು ಕೆಳಗೆ ಅನೇಕ ಗರಡಿಗಳಿವೆ. ಜಿಲ್ಲೆಯ ಯಾವ ಕೋಟೆಯಲ್ಲೂ ಇಷ್ಟೊಂದು ಗರಡಿಮನೆಗಳು ಕಂಡುಬರುವುದಿಲ್ಲ. ಜನಪದರು ಚಿತ್ರದುರ್ಗವನ್ನು ಬಯಲು ಗರಡಿಮನೆಯೆಂದೇ ಕರೆಯುತ್ತಾರೆ. ಕೆಳಗೋಟೆಯಲ್ಲಿದ್ದ ಗರಡಿಮನೆ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಗರಡಿಮನೆಯನ್ನು ಉಲ್ಲೇಖಿಸುವ ಶಾಸನವೊಂದು ಏಕನಾಥೇಶ್ವರಿ ದೇವಾಲಯದ ಹಿಂಭಾಗದಲ್ಲಿದೆ. ವಾಯುವ್ಯ ದಿಕ್ಕಿನ ಭೀಮನಕಲ್ಲು, ಕೋಡುಗಲ್ಲುಗಳ ಮಧ್ಯೆ

ಗರಡಿ ಇದೆ. ಕಡಿದಾದ ಬಂಡೆಗೆ ಕಟ್ಟಡವನ್ನು ಕಟ್ಟಿ ನಿರ್ಮಿಸಲಾಗಿರುವ ಈ ಗರಡಿಯಲ್ಲಿ ಶಾಸನವಿದೆ. ಚಿತ್ರದುರ್ಗದ ಶಾಸನೋಕ್ತ ಗರಡಿಮನೆಯಿದು. ಹುಟ್ಟು ಬಂಡೆಯೊಂದರ ಮೇಲೆ "ಪೆರೆನಾಯಕನ ಮಗ ಗೋಪಿನಾಯಕನ ಆಯಗಳ ಗರಡಿ" ಎಂಬ ಬರಹವಿದೆ. ಈ ಗರಡಿಯು ಇಂದೂ ಸುಸ್ಥಿತಿಯಲ್ಲಿದ್ದೆ. ಸಾಮಾನ್ಯವಾಗಿ ಇಲ್ಲಿರುವ ಅಂಕಣವನ್ನು ಗರಡಿಮನೆಯೆಂದು ಭಾವಿಸುತ್ತಾರೆ. ಆದರೆ ಗುಹೆಯೊಳಗಿನ ಬಂಡೆಯ ಮೇಲೆ ಮಹಿಳೆಯ ಉಬ್ಬು ಶಿಲ್ಪವು ಕೈಬೆರಳುಗಳಿಂದ ದಾರಿಯನ್ನು ತೋರಿಸುವಂತೆ ಚಿತ್ರಿಸಲಾಗಿದೆ.

ಕರುವಿನಕಟ್ಟೆ ಸರ್ಕಲ್ ಬಳಿ ಇರುವ ದೊಡ್ಡಗರಡಿ ಶೃಂಗೇರಿ ಮಠದ ಸಮೀಪದ ಸಣ್ಣ ಗರಡಿ, ಬುರುಜುಹಟ್ಟಿಗರಡಿ, ಹಗಲುದೀವಟಿಗೆ ಗರಡಿ, ಕೆಳಕೋಟೆಯಲ್ಲಿರುವ ರಾಯರಹಟ್ಟಿ ಗರಡಿ, ಬಾಲಕರ ಸರ್ಕಾರಿ, ಪ.ಪೂ. ಕಾಲೇಜ್ ಹಿಂಭಾಗದಲ್ಲಿದ್ದ ಆಂಜನೇಯ ಗರಡಿ, ಹೊರಪೇಟೆಯ ಅಂಜುಮಾನ್ ಗರಡಿ, ಹೀಗೆ ಒಟ್ಟು ೭ ಗರಡಿಗಳು ಚಿತ್ರದುರ್ಗದಲ್ಲಿವೆ.

ಗರಡಿ ಸಂಪ್ರದಾಯದಲ್ಲಿ ಅತಿ ಮುಖ್ಯವಾದುದು ಮಟ್ಟಿಪೂಜೆ. ಇದು ಗರಡಿಯವರ ಬದುಕಿನಲ್ಲಿ ಅಂಟಿಬಂದಿರುವ ಗಟ್ಟಿ ಸಂಪ್ರದಾಯ ಮಟ್ಟಿಪೂಜೆಗೆ ಮೊದಲು ಮರಗಾಲು ಹಾಕಿ ಮೆರವಣಿಗೆ ಹೊರಡುತ್ತಾರೆ. ಈ ಸಂಪ್ರದಾಯ ಹಿಂದಿನಿಂದಲೂ ಬಂದಂತೆ ತೋರುತ್ತದೆ. ಮರಗಾಲನ್ನು ಗರಡಿಮನೆಯ ಜಟ್ಟಿಗಳು ಕಟ್ಟುತ್ತಿದ್ದರು. ಹಿಂದೆ ಪಾಳೆಯಗಾರರು ಕೋಟೆಯೊಳಗೆ ಇಂತಹ ಮರಗಾಲು ಪಡೆಯನ್ನು ಇಟ್ಟುಕೊಳ್ಳುತ್ತಿದ್ದರು. ಈ ರೀತಿ ಗರಡಿಮನೆಗಳು ಕೋಟೆಯಲ್ಲಿ ಸಾವಿರಾರು ಯೋಧರಿಗೆ ತರಬೇತಿ ಕೊಟ್ಟು ಕೋಟೆಕಾಳಗಕ್ಕೆ ಸಿದ್ಧಪಡಿಸುತ್ತಿದ್ದರು. ಒಟ್ಟಿನಲ್ಲಿ ಇಂತಹ ಗರಡಿಮನೆಗಳು ಅಂದು ಕೋಟೆಯೊಳಗಿನ ಸೈನಿಕ ಶಾಲೆಗಳಾಗಿದ್ದವು (ರಾಜಶೇಖರಪ್ಪ ೧೯೯೫:೯೭:೯೧-೧೦೦).

## ಮದ್ದಿನಮನೆ

ಕೋಟೆಗಳಲ್ಲಿ ಮದ್ದು, ಗುಂಡು/ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವ ಸ್ಥಳಕ್ಕೆ ಮದ್ದಿನಮನೆ ಎಂದು ಕರೆಯಲಾಗುತ್ತದೆ. ಈ ಮದ್ದಿನ ಮನೆಗಳಿಗೆ ಆಯುಧಮನೆ ಎಂದು ಕರೆಯುವುದುಂಟು. ಇಂತಹ ಆಯುಧಾಗಾರರನ್ನು ನೋಡಿಕೊಳ್ಳುತ್ತಿದ್ದವನನ್ನು ಆಯುಧಗಾರ ಅಧ್ಯಕ್ಷನೆಂದು ಕರೆಯಲಾಗಿದೆ. ಈತನು ಯುದ್ಧಕ್ಕೆ ಬೇಕಾದ ದುರ್ಗವನ್ನು ರಕ್ಷಿಸಿಕೊಳ್ಳುವುದಕ್ಕೆ ಅವಶ್ಯಕವಾದ ಹಾಗೂ ಶತ್ರುಗಳನ್ನು ನಾಶಮಾಡಲು ಶಸ್ತ್ರಾಸ್ತ್ರಗಳನ್ನು ತಯಾರಿಸಿ ತನ್ನ ಅಧೀನದಲ್ಲಿಟ್ಟುಕೊಳ್ಳುತ್ತಿದ್ದನು. ದುರ್ಗದ ಸಂಪತ್ತುಗಳಲ್ಲಿ ಶಸ್ತ್ರಾಸ್ತ್ರಗಳು ಒಂದು ತರಹದ ಸಂಪತ್ತಾಗಿದ್ದವೆಂದು ನೀತಿ ವಾಕ್ಯಾಮೃತದಲ್ಲಿ ಹೇಳಲಾಗಿದೆ. ಶುಕ್ರನೀತಿಸಾರವು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ. ರಾಜರು ತಮಗೆ ಸಾಕಾಗವಷ್ಟು ಮದ್ದುಗುಂಡುಗಳನ್ನು ಇಂತಹ ಮದ್ದಿನ ಮನೆಗಳಲ್ಲಿ ಸಂಗ್ರಹಿಸಿಡುತ್ತಿದ್ದರು. ಈ

ಮದ್ದಿನ ಮನೆಗಳನ್ನು ಆಯಕಟ್ಟಿನ ಸ್ಥಳಗಳಲ್ಲಿ ವ್ಯವಸ್ಥಿತವಾಗಿ ನಿರ್ಮಿಸಿರುವುದು ಕಂಡುಬರುತ್ತದೆ. ದ್ವಾರಬಾಗಿಲು, ಬುರುಜು, ಬತೇರಿ, ಅರಮನೆ ಮುಂತಾದ ಸ್ಥಳಗಳಲ್ಲಿಯೇ ಅಲ್ಲದೆ ಮದ್ದಿನ ಮನೆಗಳಿಗೂ ಯೋಗ್ಯವಾದ ಸ್ಥಳಗಳನ್ನು ಆಯ್ಕೆ ಮಾಡಿ ನಿರ್ಮಿಸಲಾಗುತ್ತಿತ್ತು. ಮದ್ದಿನಮನೆಗಳಿಗೂ ಕೂಡ ಅರಮನೆಗೆ ಇದ್ದ ಹಾಗೆ ಕೋಟೆ, ಕಂದಕ, ಬಾವಿ, ಮುಂತಾದವುಗಳನ್ನು ರಚಿಸಬೇಕೆಂದು ಕೌಟಿಲ್ಯ ತನ್ನ ಗ್ರಂಥ ಅರ್ಥಶಾಸ್ತ್ರದಲ್ಲಿ ವಿವರಿಸಿದ್ದಾರೆ. ಅಲ್ಲದೆ ಯಮನ ಹೆಸರಿನಲ್ಲಿ ಇಂತಹ ಆಯುಧಾಗಾರಕ್ಕೆ ಅರ್ಚನೆಯನ್ನು ಮಾಡಬೇಕೆಂದು ಹೇಳಿದ್ದಾನೆ. ಸಂಗ್ರಹಿಸಿದ ಆಯುಧಗಳನ್ನು ಗಾಳಿ ಮತ್ತು ಬಿಸಿಲು ತಾಗುವಂತೆ ೩-೪ ದಿನಗಳಿಗೊಮ್ಮೆ ಸ್ಥಳ ಬದಲಾವಣೆ ಮಾಡಬೇಕಾಗುತ್ತದೆ. ಶಾಖ, ನೀರು, ಕ್ರಿಮಿಗಳಿಂದ ಹಾಳಾಗದಂತಿರಬೇಕು. ಆಯುಧಗಳ ಸ್ವಭಾವ, ಲಕ್ಷಣ, ರೂಪ, ಪ್ರಮಾಣ ತಂದ ಸ್ಥಳ ಹೀಗೆ ಎಲ್ಲವನ್ನು ಬರೆದಿಡುವುದು ಆಯುಧಗಾರನ ಕರ್ತವ್ಯವಾಗಿತ್ತು (ಜೋಯಿಸರು ೨೦೦೯:೬೭).

ಚಿತ್ರದುರ್ಗ ಕೋಟೆಯಲ್ಲಿ ಮದ್ದಿನಮನೆಯೆಂದು ಕರೆಯುವ ಸು.೧೦ ಕಟ್ಟಡಗಳಿವೆ. ಇವುಗಳ ರಚನೆ ಮತ್ತು ವಿನ್ಯಾಸದಲ್ಲಿ ವ್ಯತ್ಯಾಸವನ್ನು ಕಾಣಬಹುದಾಗಿದೆ. ಅರಮನೆಯ ಪಾಳು ಪ್ರದೇಶದಲ್ಲಿ ಎರಡು ಮದ್ದಿನ ಮನೆಗಳಿವೆ. ೧೭.೫ ಅಡಿ ಉದ್ದ, ೧೦ ಅಡಿ ಎತ್ತರ ಮತ್ತು ೩೪ ಅಡಿ ಅಗಲದ ಸಮಾನ ಅಳತೆಯಲ್ಲಿ ಇವುಗಳನ್ನು ನಿರ್ಮಿಸಲಾಗಿದೆ. ನಯವಾದ ಹಾಗೂ ೧೧ ಅಡಿ ಉದ್ದ ೩ ಅಡಿ ದಪ್ಪ ಅಳತೆಯ ಕಲ್ಲುಗಳಿಗೆ ಗಾರೆ ಬಳಸಿ ವ್ಯವಸ್ಥಿತವಾದ ಗೋಡೆಯನ್ನು ಕಟ್ಟಿದ್ದಾರೆ. ಕಟ್ಟಡದ ಮೇಲ್ಭಾಗದಲ್ಲಿ ೭ ಅಡಿ ಎತ್ತರದಲ್ಲಿ ಕಮಾನಿನಂತೆ ಗಾರೆಗಚ್ಚಿನಿಂದ ಮುಚ್ಚಿ ಮಳೆಯ ನೀರು ಕಟ್ಟಡದೊಳಗೆ ಹೋಗದಂತೆ ಕಟ್ಟಲಾಗಿದೆ. ೨ ಕಟ್ಟಡಗಳಿಗೂ ಮೇಲ್ಭಾಗದಲ್ಲಿ ಕಳಸಗಳನ್ನು ಸ್ಥಾಪಿಸಲಾಗಿದೆ. ಕಟ್ಟಡದ ಮೇಲ್ಭಾಗದ ಕಲ್ಲುಚಪ್ಪಡಿಗಳನ್ನು ತೆಗೆಯದಂತೆ ಕಬ್ಬಿಣದ ಮಳೆಗಳಿಂದ ಬೆಸೆಯಲಾಗಿದೆ. ೨ ಕಟ್ಟಡಗಳಿಗೆ ಉತ್ತರ ಮತ್ತು ಪಶ್ಚಿಮದಲ್ಲಿ ೭ ಅಡಿ ಎತ್ತರವಾದ ಪ್ರಕಾರ ಗೋಡೆಗಳಿವೆ. ಮದ್ದಿನ ಮನೆಗಳಿಗೆ ೩.೩ x ೨.೫ x ೪.೪ ಅಡಿಯ ಬಾಗಿಲುಗಳಿದ್ದು ಬಾಗಿಲಲ್ಲಿ ಕಮಾನು ಕಾಯುತ್ತಿರುವ ಸುಂದರವಾದ ೨ ಶಿಲ್ಪಗಳಿವೆ. ಕಟ್ಟಡದಲ್ಲಿ ಎಲ್ಲಿಯೂ ಗಾಳಿ, ಬೆಳಕಿನ ವ್ಯವಸ್ಥೆಯಿಲ್ಲ. ಒಳಭಾಗವನ್ನು ಘಂಟಾಕೃತಿಯಲ್ಲಿ ರಚಿಸಲಾಗಿದ್ದು, ಒಳಮೈಗೆ ಗಾರೆಯ ಲೇಪನ ಮಾಡಲಾಗಿದೆ. ಇವು ಇಡೀ ಬೆಟ್ಟದಲ್ಲಿ ಸುಂದರ ಹಾಗೂ ವ್ಯವಸ್ಥಿತವಾದ ಮದ್ದಿನ ಮನೆಗಳಾಗಿವೆ.

ಚಿತ್ರದುರ್ಗ ಬೆಟ್ಟದಲ್ಲಿರುವ ಅನೇಕ ಮದ್ದಿನ ಮನೆಗಳಿಂದ ಇಡೀ ಕೋಟೆಯೇ ಒಂದು ಮದ್ದುಗುಂಡುಗಳ ಸಂಗ್ರಹಾಲಯವಾಗಿತ್ತೆನ್ನಬಹುದು. ಅಪಾಯಕಾರಿ ಸ್ಥಳಗಳಿಗೆ ಮುಂಜಾಗ್ರತೆಯ ಕ್ರಮವಾಗಿ ಮದ್ದುಗುಂಡುಗಳನ್ನು ಪೂರೈಸಲು ಈ ರೀತಿಯ ಮದ್ದಿನ ಮನೆಗಳನ್ನು ಬುರುಜು ಬತೇರಿಗಳಲ್ಲಿ ದ್ವಾರಬಾಗಿಲುಗಳಲ್ಲಿ ಸ್ಥಾಪಿಸಿರುವುದು ಗಮನಾರ್ಹ. ಕೆಲವು ಕಡೆ ಇಂತಹ

ಮದ್ದಿನಮನೆಗಳು ಹೊರ ಜನರಿಗೆ ಕಾಣದ ಹಾಗೆ ಕೋಡುಗಲ್ಲುಗಳ ಮಧ್ಯೆ ನಿರ್ಮಾಣ ಮಾಡಿದ್ದಾರೆ. ಬಾಗಿಲ ಬಳಿಯಿರುವ ಪಹರೆ ಗೃಹಗಳಲ್ಲೂ ಮದ್ದುಗುಂಡುಗಳ ಸಂಗ್ರಹವಿರುತ್ತಿತ್ತು. ಹಾಗಾಗಿ ಪಹರೆಗೃಹಗಳು ಒಂದು ರೀತಿಯ ಮದ್ದಿನ ಮನೆಗಳೇ ಆಗಿರುತ್ತಿದ್ದವು (ತಿಪ್ಪೇಸ್ವಾಮಿ ೨೦೦೪:೨೮೩).

### ಕಣಜ ಮತ್ತು ಸೈನಿಕ ವಸತಿ ನಿಲಯಗಳು

ಕಣಜಗಳು ಕೋಟೆಯ ಸ್ಮಾರಕಗಳಲ್ಲಿ ಅತಿ ಮುಖ್ಯವಾದ ಅಂಗಭಾಗಗಳಾಗಿವೆ. ದುರ್ಗಗಳಲ್ಲಿ/ಕೋಟೆಗಳಲ್ಲಿ ಬಹಳ ವರ್ಷಗಳ ಕಾಲ ಕೆಡದೆ ಉಪಯೋಗಿಸಲು ಯೋಗ್ಯವಾದ ೨೨ ವಸ್ತುಗಳನ್ನು ಸಂಗ್ರಹಿಸಬೇಕೆಂದು ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಹೇಳಿದ್ದಾನೆ. ಈ ರೀತಿಯ ವಸ್ತುಗಳನ್ನು ಸಂಗ್ರಹಿಸಲು ನಿರ್ಮಿಸಿದ ಸ್ಮಾರಕಗಳೇ ಕಣಜಗಳು. ಒಟ್ಟಾರೆ ಇದು ಧಾನ್ಯಗಳನ್ನು ಸಂಗ್ರಹಿಸುವ ಸ್ಥಳಗಳಾಗಿವೆ. ಎಲ್ಲಾ ಸಂಗ್ರಹಗಳಿಗಿಂತ ಧಾನ್ಯ ಸಂಗ್ರಹ ಮುಖ್ಯವಾದುದೆಂದು ನೀತಿ ವಾಕ್ಯಾಮೃತದಲ್ಲಿ ಹೇಳಲಾಗಿದೆ. ಹಾಗೂ ಕಣಜಗಳಿಗೆ ಕೋಷ್ಠಗಾರವೆಂದು ಹೇಳಲಾಗಿದೆ. ಆಹಾರ ಸಂಗ್ರಹಿಸಿ ದಾಸ್ತಾನು ಮಾಡುವ ಸ್ಥಾನಕ್ಕೆ ಕೋಷ್ಠಗಾರವೆಂದು ಕರೆಯಲಾಗಿದೆ. ಇದನ್ನು ನೋಡಿಕೊಳ್ಳಲು ಕೋಷ್ಠಗಾರನೆಂಬ ಅಧ್ಯಕ್ಷ ಇರುತ್ತಿದ್ದನು. ದುರ್ಗಗಳಲ್ಲಿ ಕಲ್ಲಿನ ಕಣಜಗಳು, ಮಣ್ಣಿನ ಕಣಜಗಳನ್ನು ವಿವಿಧ ವಿನ್ಯಾಸದಲ್ಲಿ ರಚಿಸಲಾಗಿದೆ. ಹಾಗೂ ನೆಲದೊಳಗೆ ಕಣಜಗಳನ್ನು ನಿರ್ಮಿಸುತ್ತಿದ್ದರು. ಇವುಗಳಿಗೆ ಹಗೇವುಗಳೆಂದು ಸಹ ಕರೆಯುತ್ತಿದ್ದರು. ಈ ಹಿಂದೆ ರಾಜರು ಧಾನ್ಯ ಸಂಗ್ರಹವಾಗುತ್ತಿದ್ದ ಪ್ರದೇಶದಲ್ಲಿ ಈ ರೀತಿಯ ಧಾನ್ಯ ಸಂಗ್ರಹಗಳನ್ನು ನಿರ್ಮಿಸಿ ನಂತರ ಅವಶ್ಯಕತೆ ಬಂದಾಗ ರಾಜಧಾನಿಗೆ ತರಿಸಿಕೊಳ್ಳುವ ವ್ಯವಸ್ಥೆ ಮಾಡಿದ್ದಿರಬಹುದು. ಒಂದೊಂದು ಕೋಟೆಯಲ್ಲೂ ವಿವಿಧ ರೀತಿಯ ಕಣಜಗಳ ರಚನೆಯನ್ನು ಮಾಡಿದ್ದಾರೆ. ಇವುಗಳನ್ನು ವೃತ್ತಾಕಾರವಾಗಿಯೂ ಹಾಗೂ ಚೌಕಾಕಾರವಾಗಿಯೂ ನಿರ್ಮಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯ ಕಣಜಗಳಲ್ಲಿಯೇ ಅತ್ಯಂತ ವ್ಯವಸ್ಥಿತವಾಗಿ ನಿರ್ಮಿಸಿರುವ ಕಣಜಗಳು ಚಿತ್ರದುರ್ಗ ಕೋಟೆಯಲ್ಲಿನ ಅರಮನೆಯ ಪಾಳು ಪ್ರದೇಶದಲ್ಲಿ ಸು. ೧೫ಕ್ಕೂ ಹೆಚ್ಚು ಕಣಜಗಳು ಈಗಲೂ ಉಳಿದುಕೊಂಡು ಬಂದಿವೆ. ಇವುಗಳ ವಿನ್ಯಾಸ ಮತ್ತು ರಚನೆಯಲ್ಲಿ ತುಂಬಾ ವ್ಯತ್ಯಾಸವನ್ನು ಕಾಣಬಹುದಾಗಿದ್ದು, ವೃತ್ತಾಕಾರದ ಕಣಜಗಳ ಕೆಳಭಾಗದಲ್ಲಿ ೫ ಅಡಿ ಎತ್ತರದವರೆಗೆ ಕಲ್ಲಿನ ಅಧಿಷ್ಠಾನವನ್ನು ಕಟ್ಟಿ ನಂತರ ೨ ಅಡಿ ಎತ್ತರದ ಗಚ್ಚುಮಣ್ಣಿನ ನಾಲ್ಕೈದು ಸುತ್ತುಗಳನ್ನು ಒಂದಾದ ಮೇಲೊಂದರಂತೆ ನಿರ್ಮಿಸಿದ್ದಾರೆ. ಈ ಮಣ್ಣಿನ ಗೋಡೆಯು ೧೦ ರಿಂದ ೧೫ ಅಡಿ ಎತ್ತರವರೆಗಿದೆ. ಇಂತಹ ಕಣಜಗಳ ಸುತ್ತಳತೆ ೬೫ ರಿಂದ ೧೦೦ ಅಡಿಯವರೆಗೆ ಇರುವುದು ಕಂಡುಬರುತ್ತಿವೆ. ಕೆಲವು ಕಣಜಗಳಿಗೆ ಮೇಲ್ಭಾಗದಲ್ಲಿ ಬಾಗಿಲುಗಳಿದ್ದರೆ, ಮತ್ತೆ

ಕೆಲವು ಕಣಜಗಳಿಗೆ ಬಾಗಿಲುಗಳೇ ಇಲ್ಲ. ಕಲ್ಲಿನಿಂದ ನಿರ್ಮಿಸಿರುವ ಕಣಜಗಳು ಆಯತಾಕಾರವಾಗಿದ್ದು, ನಯಗೊಳಿಸಿದ ಕಲ್ಲುಗಳಿಗೆ ಗಾರೆಯನ್ನು ಬಳಸಿರುವುದು ಕಂಡುಬರುತ್ತದೆ. ಉದಾ: ಸಂಪಿಗೆ ಸಿದ್ದೇಶ್ವರನ ದೇವಾಲಯದ ಪಕ್ಕದಲ್ಲಿರುವ ಕಣಜ ೨೨ x ೮೬ x ೧೨ ಅಡಿ ವಿಸ್ತಾರದಲ್ಲಿ ನಿರ್ಮಿಸಲಾಗಿದ್ದು, ಕಣಜದ ಸುತ್ತಲೂ ಇಳಿಜಾರು ಬಂಡೆಯಿದ್ದು ಎಂತಹ ಮಳೆ ಬಂದರೂ ಕಣಜಗಳಿಗೆ ನೀರು ಹೋಗದಂತೆ ಹುಟ್ಟು ಬಂಡೆಯ ಮೇಲೆ ನಿರ್ಮಿಸಲಾಗಿದೆ.

ಚಿತ್ರದುರ್ಗದ ಪಾಳೆಯಗಾರರ ದಾಖಲೆಗಳು ಹೇಳುವಂತೆ ಸು.೧೨ ವರ್ಷಗಳವರೆಗೆ ಸಾಕಾಗುವಷ್ಟ ದವಸಧಾನ್ಯಗಳನ್ನು ಇಂತಹ ಕಣಜಗಳಲ್ಲಿ ಸಂಗ್ರಹಮಾಡಿ ಇಡುತ್ತಿದ್ದರೆನ್ನಲಾಗಿದೆ. ಇದರಲ್ಲಿ ಹುಣಸೆ ಹಣ್ಣಿನ ಕಣಜ, ರಾಗಿ ಕಣಜ, ಮುಂತಾದ ಕಣಜಗಳ ಉಲ್ಲೇಖಗಳಿವೆ.

ಪ್ರಜಾರಕ್ಷಣೆಯ ಏಳು ಅಂಗಗಳಲ್ಲೊಂದಾದ ಸೇನೆಯ ವಸತಿ ನೆಲೆಗಳು ಕೋಟೆಯಷ್ಟೇ ಪ್ರಾಮುಖ್ಯತೆ ಪಡೆದುಕೊಂಡಿವೆ. ಕೋಟೆಯಲ್ಲಿ ಸೈನಿಕರ ವಸತಿ ನಿಲಯಗಳು ಸಾಮಾನ್ಯವಾಗಿ ಕೋಟೆಯ ಒಳಭಾಗದಲ್ಲಿಯೇ ಇರುತ್ತದೆ. ಇವರ ಕಟ್ಟಡಗಳು ಗುಂಪು-ಗುಂಪಾಗಿ ಕಂಡುಬರುತ್ತವೆ. ಈ ಕಟ್ಟಡಗಳ ಬಳಿ ನೀರಿನ ಆಶ್ರಯ ತಾಣಗಳಿಂದ, ಬಾವಿ, ಕೆರೆ, ಹೊಂಡ, ಪುಷ್ಕಣಿಗಳು ಇರುತ್ತವೆ. ಅಲ್ಲದೆ ಈ ಪ್ರದೇಶದ ಸುತ್ತಲೂ ದೇವಾಲಯಗಳ ಪೇಟೆ, ಬಜಾರುಗಳಿರುತ್ತಿದ್ದವು. ಸೈನಿಕರ ವಸತಿ ನಿಲಯಗಳ ಸುತ್ತಲೂ ಭದ್ರವಾದ ಕೋಟೆ, ಕಂದಕ, ಬಾಗಿಲುಗಳನ್ನು ಏರ್ಪಡಿಸಿರುವುದುಂಟು.

ಸೈನಿಕರು ಕೋಟೆಯ ಸೂಕ್ಷ್ಮ ಪ್ರದೇಶವನ್ನು ದಿನವಿಡೀ ಕಾವಲು ಕಾಯಬೇಕಾಗುತ್ತಿತ್ತು. ಇವರು ಕೋಟೆಯದ್ವಾರ ಬುರುಜು, ಬತೇರಿ, ಕಂದಕ, ಕಾವಲುಗೋಪುರ, ಮದ್ದಿನಮನೆ ಮುಂತಾದ ಸ್ಥಳಗಳಲ್ಲಿ ಸರದಿ ಪ್ರಕಾರ ಕಾವಲು ಕಾಯಬೇಕಾಗುತ್ತಿರುತ್ತಿತ್ತು. ಇಂತಹ ಪ್ರದೇಶಗಳಲ್ಲಿ ಮಂಟಪ, ಛಾವಡಿಗಳನ್ನು ನಿರ್ಮಿಸಿ ಸೈನಿಕರಿಗೆ ವಾಸಿಸಲು ಅವಕಾಶ ಕಲ್ಪಿಸಲಾಗುತ್ತಿತ್ತು. ಚಿತ್ರದುರ್ಗ ಕೋಟೆಯ ನಾಗರಸುತ್ತಿನ ಸಾಲಿನಲ್ಲಿ ಈ ರೀತಿಯ ಮಂಟಪಗಳಿವೆ. ಇಂಥ ಮಂಟಪಗಳನ್ನು ಚಾವಡಿಗಳೆಂದು ಕರೆಯಲಾಗಿದೆ. ಈ ರೀತಿಯ ಚಾವಡಿಗಳು ಚಿತ್ರದುರ್ಗ ಕೋಟೆಗಳಲ್ಲಿ ಬಹಳಷ್ಟಿವೆ. ಚಾವಡಿಯ ಸುತ್ತಲೂ ಮಣ್ಣಿನ ಹೆಂಡೆಗಳಿಂದ ಗೋಡೆಗಳನ್ನು ಕಟ್ಟಿ ವಸತಿ ನೆಲೆಯನ್ನಾಗಿ ಮಾಡಿಕೊಂಡಿರುವುದು ಹಾಗೂ ಮಂಟಪದ ಮೇಲ್ಛಾವಣಿಯನ್ನು ಗಾರೆ ಗಚ್ಚುಗಳಿಂದ ಮುಚ್ಚಲಾಗಿದ್ದು ಮಳೆಯ ನೀರು, ಮಂಟಪದೊಳಗೆ ಹೋಗದಂತೆ ರಚನೆ ಮಾಡಲಾಗಿದೆ. ಗುಪ್ತ ಸ್ಥಳಗಳಲ್ಲಿ ಕೋಡುಕಲ್ಲುಗಳ ಮಧ್ಯೆ ಬಂಡೆಯಿಂದ ಬಂಡೆಗೆ ಗೋಡೆ ಕಟ್ಟಿ ಅವುಗಳನ್ನೇ ಸೈನಿಕರ ನೆಲೆಗಳನ್ನಾಗಿ ಮಾಡಿಕೊಂಡಿರುವರು (ತಿಪ್ಪೇಸ್ವಾಮಿ ೨೦೦೪:೨೮೮ ; ಶ್ರೀನಿವಾಸ ತೆಲಗಾವಿ ೧೯೭೬:೬೩-೮೯).

## ನೀರಿನ ಆಶ್ರಯ ತಾಣಗಳು

ಲಕ್ಷ್ಮಣ್ ತೆಲಗಾವಿ, ವೆಂಕಣ್ಣಚಾರ್ ಕೆ. ಹಾಗೂ ಹುಲ್ಲೂರು ಶ್ರೀನಿವಾಸ ಜೋಯಿಸರು ಜೊತೆಗೂಡಿ ಸಂಪಾದಿಸಿರುವಂತಹ ಚಿತ್ರದುರ್ಗ ಜಿಲ್ಲಾ ದರ್ಶಿನಿ, ೧೯೮೦ ಎಂಬ ಲೇಖನದ ಹೇಳಿಕೆಯ ಪ್ರಕಾರ ನೀರು ಪಂಚಭೂತಗಳಲ್ಲೊಂದಾಗಿದೆ. ನೀರು ಸಕಲ ಪ್ರಾಣಿಗಳ ಜೀವದಾಳವಾಗಿದೆ. ಕೋಟೆಗಳಲ್ಲಿ ಆಹಾರ ಸಂಗ್ರಹದಷ್ಟೇ ನೀರಿನ ಸಂಗ್ರಹವಾಗಿದೆ. ಚಿತ್ರದುರ್ಗದ ಕೋಟೆಯಲ್ಲಿ ಗೋಪಾಲಕೃಷ್ಣ ದೇವಾಲಯದ ಮುಂದೆ ಇರುವ ದೊಡ್ಡ ಕೊಳ್ಳವೊಂದಕ್ಕೆ ಒಂದು ಅಣೆಕಟ್ಟು ಕಟ್ಟಿ ನೀರು ನಿಲ್ಲುವಂತೆ ಹೊಂಡವನ್ನು ರಚಿಸಿದ್ದಾರೆ. ದೇವಾಲಯದ ಮುಂದೆ ಇರುವ ಈ ಹೊಂಡವನ್ನು ಗೋಪಾಲಸ್ವಾಮಿ ಹೊಂಡವೆಂದೇ ಕರೆಯುತ್ತಾರೆ. ಬೆಟ್ಟದ ಮಧ್ಯಭಾಗದಲ್ಲಿರುವ ಈ ಹೊಂಡಕ್ಕೆ ಸುತ್ತಲೂ ಇರುವ ಬೆಟ್ಟಗಳಿಂದ ಬಂದು ಸೇರುವ ಒಳಜಲವಾಗಿದೆ. ಈ ಹೊಂಡವನ್ನು ಎಂದೂ ಒಣಗದ ಜಲಶಾಲಯವನ್ನಾಗಿ ಮಾಡಿದೆ. ಹತ್ತಾರು ವರುಷಗಳ ಕಾಲ ಮಳೆ ಬಾರದಿದ್ದರೂ ಎಂದೂ ನೀರಿನ ಕೊರತೆಯಾಗದಂತೆ ಬಹಳಷ್ಟು ಪ್ರಮಾಣದ ನೀರನ್ನು ಈ ಹೊಂಡವು ಬೆಟ್ಟದ ಮೇಲಿದ್ದ ಸೈನಿಕರಿಗೆ ಒದಗಿಸುತ್ತಿತ್ತು. ಹೊಂಡದ ಹೆಚ್ಚಾದ ನೀರು ಕೆಳಗೆ ಹೋಗುವಂತೆ ವ್ಯವಸ್ಥೆಯಿದ್ದು ಈ ನೀರಿಗೂ ಮಧ್ಯಭಾಗದಲ್ಲಿ ಅಡ್ಡಗಟ್ಟೆಯನ್ನು ನಿರ್ಮಿಸಿ ಅಕ್ಕ-ತಂಗಿ ಎಂಬ ಹೊಂಡಗಳನ್ನಾಗಿ ನಿರ್ಮಿಸಲಾಗಿದೆ. ಈ ಅಡ್ಡಗಟ್ಟೆಯನ್ನು ನೀರು ಬಸಿಯುವ ತಂತ್ರದಿಂದ ನಿರ್ಮಿಸಲಾಗಿದೆ. ಇಲ್ಲಿಯೂ ಹೆಚ್ಚಾದ ನೀರು ತಣ್ಣೀರು ದೊಣೆ ಮೂಲಕ ಒನಕೆ ಕಿಂಡಿ ಮುಖಾಂತರ ಪಶ್ಚಿಮದ ಕಂದಕವನ್ನು ಸೇರುತ್ತದೆ. ಪಶ್ಚಿಮದ ಬೆಟ್ಟಗಳಿಂದ ಬಂದಂತಹ ನೀರು ಕಂದಕಗಳ ಮುಖಾಂತರ ಸಿಹಿನೀರು ಹೊಂಡಕ್ಕೆ ಸೇರುತ್ತದೆ. ಹೀಗೆ ಪಶ್ಚಿಮ ಭಾಗದ ನೀರನ್ನು ವ್ಯರ್ಥವಾಗದಂತೆ ಹೊಂಡಗಳನ್ನು ನಿರ್ಮಿಸಿ ಬಳಸಿಕೊಳ್ಳಲಾಗಿದೆ. ಸಿಹಿನೀರು ಹೊಂಡದ ನೀರನ್ನು ಸು. ೧ ಕಿ.ಮೀ. ಸುರಂಗದ ಮೂಲಕ ನಗರದ ಮಧ್ಯಭಾಗದಲ್ಲಿ ನಿರ್ಮಿಸಿರುವ ಸಂತೆಯ ಹೊಂಡಕ್ಕೆ ಕೊಂಡೊಯ್ದಿರುವುದು ಅಂದಿನ ತಂತ್ರಜ್ಞಾನಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಈ ವ್ಯವಸ್ಥೆ ಇಂದಿಗೂ ಮುಂದುವರೆದಿರುವುದು ಗಮನಾರ್ಹ ಅಂಶವಾಗಿದೆ. ಬೆಟ್ಟದ ದಕ್ಷಿಣ ಹಾಗೂ ಪೂರ್ವಭಾಗದಲ್ಲೂ ಇದೇ ತೆರನಾದ ವ್ಯವಸ್ಥೆಯಿದೆ. ಆಗ್ನೇಯ ದಿಕ್ಕಿನಲ್ಲಿರುವ ತಿಮ್ಮಣ್ಣ ನಾಯಕನ ಕೆರೆ ನಂತರ ದೊಡ್ಡಣ್ಣನ ಕೆರೆ, ಕರಿವರ್ತಿ ಕೆರೆ ಹೀಗೆ ಕ್ರಮವಾಗಿ ಅನೇಕ ಕೆರೆಗಳನ್ನು ನಿರ್ಮಿಸಲಾಗಿದೆ. ಕರಿವರ್ತಿ ಕೆರೆಯನ್ನು ಶ್ರೀರಾಮದೇವರ ಒಡ್ಡು ಎಂದೂ ಕರೆಯವುದುಂಟು. ಕರಿವರ್ತಿಯಲ್ಲಿ ಹೆಚ್ಚಾದ ನೀರು ಸುರಂಗ ಮಾರ್ಗದಲ್ಲಿ ಹರಿದುಹೋಗುವಂತೆ ತೂಬಿನ ವ್ಯವಸ್ಥೆಯಿದೆ. ಇಲ್ಲಿಂದ ಹೆಚ್ಚಾದ ನೀರು ಕಾಮನಬಾಗಿಲ ಕೋಟೆಯ ಸುತ್ತಿನ ಕಂದಕಕ್ಕೆ ಹರಿದು ಹೋಗುವಂತೆ ಮಾಡಿರುವ ವ್ಯವಸ್ಥೆ ಆಶ್ಚರ್ಯ ಹುಟ್ಟಿಸುತ್ತದೆ. ಬೆಟ್ಟದ ಮೇಲಿಂದ ಬರುವ ನೀರಿಗೆ ಕರಿವರ್ತಿಯ ಮೇಲ್ಭಾಗದಲ್ಲಿ

ಅಡ್ಡಗಟ್ಟಿ ಹೊಂಡಗಳನ್ನು ನಿರ್ಮಿಸಲಾಗಿದೆ. ಈ ಅಡ್ಡಗಟ್ಟೆಯು ೩೫ ಅಡಿ ಎತ್ತರವಾಗಿದ್ದು, ೨೫-೨೬ ಅಂಗುಲದ ಕಲ್ಲುಗಳನ್ನು ಬಳಸಿ ಗೋಡೆಯನ್ನು ಕಟ್ಟಲಾಗಿದೆ. ಮೇಲಿಂದ ಬಂದ ನೀರು ಈ ಕಟ್ಟಡದಿಂದ ಬಸಿದು ಮುಂದೆ ಕರಿವರ್ತಿಗೆ ಸಾಗುತ್ತಿತ್ತು. ಗೋಡೆಯ ತಳಭಾಗದಲ್ಲಿ ೨೨-೧೭ ಅಡಿ ಅಂಗುಲದ ಎರಡು ತೂಬುಗಳಿವೆ. ತೂಬುಗಳ ಮಧ್ಯೆ ಎರಡೆರಡು ಕಬ್ಬಿಣದ ಸರಳುಗಳಿವೆ. ಇಡೀ ಕಟ್ಟಡದಲ್ಲಿ ಹಾಗೂ ಕರಿವರ್ತಿಯಲ್ಲಿ ಸು. ೨೦ ಅಡಿ ನೀರು ನಿಲ್ಲುವಂತೆ ಮಾಡಲಾಗಿದ್ದು, ಹೆಚ್ಚಾದ ನೀರು ಕಂದಕದ ಮೂಲಕ ಕೋಟೆಯ ಪೂರ್ವದಿಕ್ಕಿನಲ್ಲಿರುವ ಹೊರಕೋಟೆಯ ಕಂದಕಕ್ಕೆ ಹೋಗುವಂತೆ ವ್ಯವಸ್ಥೆಯನ್ನು ಕಟ್ಟಿಸಲಾಗಿದೆ. ಹೀಗೆ ಇಡೀ ಬೆಟ್ಟದ ಸುತ್ತಲೂ ಹರಿಯುವ ನೀರನ್ನು ವ್ಯರ್ಥವಾಗದಂತೆ ಸಂಗ್ರಹಿಸಿ ಕೆರೆ, ಹೊಂಡಗಳನ್ನು ದುರ್ಗದ ಸುತ್ತಲೂ ನಿರ್ಮಿಸಿದ್ದಾರೆ. ಈ ವ್ಯವಸ್ಥೆಯಿಂದ ಚಿತ್ರದುರ್ಗ ಕೋಟೆಯನ್ನು 'ಜಲದುರ್ಗ'ವನ್ನಾಗಿ ಮಾಡಿದ್ದಾರೆನ್ನಬಹುದಾಗಿದೆ (ತೆಲಗಾವಿ, ವೆಂಕಣ್ಣಾಚಾರ್, ಜೋಯಿಸರು ೧೯೮೦:೪೭).

**ಕೋಟೆಯ ಭಿತ್ತಿಚಿತ್ರಗಳು**

ಕೋಟೆಯ ಗೋಡೆ, ಬಾಗಿಲು, ಬಂಡೆ, ದೇವಾಲಯಗಳು, ಮತ್ತಿತರೆ ಭಾಗಗಳಲ್ಲಿ ಅನೇಕ ಉಬ್ಬುಶಿಲ್ಪ, ಗೀರುಚಿತ್ರ, ರೇಖಾಚಿತ್ರಗಳು ಕಂಡುಬರುತ್ತವೆ. ವಿಶ್ವಕರ್ಮನು ಕೋಟೆಗೋಡೆಗಳ ಮೇಲೆ ರಾಜಚಿಹ್ನೆಗಳಾದ ಧ್ವಜ, ಸೈನಿಕ, ಸಿಂಹ, ಆನೆ, ಕುದುರೆ, ಹಾವು, ಮೀನು ಮುಂತಾದ ಚಿತ್ರಗಳನ್ನು ನಿರ್ಮಿಸಬೇಕೆಂದು ಹೇಳಿದ್ದಾನೆ. ಈ ಸ್ಮಾರಕ ಶಿಲ್ಪಗಳು ಅಂದಿನ ಆಚರಣೆ, ಸಂಪ್ರದಾಯಗಳ ಪ್ರತೀಕವೂ ಹೌದು, ಅಂದಿನ ಸತಿಕಲ್ಲು, ವೀರಗಲ್ಲು, ಹಾಗೆಯೇ ಕೋಟೆಯ ಹೊರ ಮತ್ತು ಒಳಗೋಡೆಗಳು ಅಂದಿನ ಬದುಕಿನ ಸುಸ್ಥಿತಿ ಮತ್ತು ಸಂಸ್ಕೃತಿಯನ್ನು ಅಭಿವ್ಯಕ್ತಪಡಿಸುತ್ತದೆ. ಇಂತಹ ಚಿತ್ರಗಳು ಕಾಲಾನಂತರದಲ್ಲಿ ಧರ್ಮಶಾಸ್ತ್ರಗಳ ಚೌಕಟ್ಟು ಪಡೆದುಕೊಂಡಿರುವುದು ಸ್ಪಷ್ಟವಾಗುತ್ತದೆ. ಇವುಗಳ ಸಹಾಯದಿಂದ ಕೋಟೆಯ ಜನಜೀವನ, ಕಾಲಮಾನ, ಧಾರ್ಮಿಕ ಆಚರಣೆ ಮುಂತಾದ ವಿಷಯಗಳನ್ನು ತಿಳಿದುಕೊಳ್ಳಬಹುದಾಗಿದೆ. ಅಲ್ಲದೆ ಇವುಗಳ ರಚನೆಯ ಹಿನ್ನೆಲೆ, ಉದ್ದೇಶ, ಆಕಾರ, ಮತ್ತಿತರ ಉದ್ಧೇಶಗಳನ್ನು ಈ ಚಿತ್ರಗಳ ಮೂಲಕ ತಿಳಿದುಕೊಳ್ಳಬಹುದಾಗಿದೆ (ರಾಮಚಂದ್ರರಾವ್ ೧೯೭೫:೧೯೮).

ಚಿತ್ರದುರ್ಗ ಕೋಟೆಯಲ್ಲಿ ಕಂಡುಬಂದ ಇಂತಹ ಉಬ್ಬುಶಿಲ್ಪಗಳು ಕೋಟೆಯ ಸಾಂಸ್ಕೃತಿಕ ಇತಿಹಾಸದ ಬಗ್ಗೆ ಬೆಳಕು ಚೆಲ್ಲುತ್ತವೆ. ಈಶ್ವರ, ವೀರಭದ್ರ, ಗಣಪತಿ, ಹನುಮಂತ, ಮುಂತಾದ ಶಿಲ್ಪಗಳನ್ನು ರಕ್ಷಣಾತ್ಮಕ ಹಿನ್ನೆಲೆಯ ಉದ್ದೇಶದಿಂದ ಬಿಡಿಸಲಾಗಿದೆ. ಹಾವು, ಮೊಸಳೆ, ಎಚ್ಚರಿಕೆಯನ್ನು ಸೂಚಿಸಿದರೆ ಆಮೆ, ರಕ್ಷಣೆಯ ಸೂಚಕ. ಗಜಲಕ್ಷ್ಮೀ, ಪೂರ್ಣಕುಂಭಗಳು ಶುಭ ಚಿಹ್ನೆಗಳ ಸ್ವರೂಪದಲ್ಲಿ ಹಾಗೂ ಪವಿತ್ರ ಕಲ್ಪನಾ ಬೀದಿಗಳಲ್ಲಿ ಸ್ಥಾಪಿಸಿದ್ದಾರೆ. ಲಜ್ಜಾಗೌರಿಯು ಮಾತೃದೇವತೆಯಾಗಿದ್ದು, ಈಕೆಯು ವಿಶ್ವಸೃಷ್ಟಿಯ ದೇವತೆಯೆಂಬ ಉಪಾಸನೆಯು ಚಾಲ್ತಿಯಲ್ಲಿದೆ.

ಸೃಷ್ಟಿಯ ಹಿನ್ನೆಲೆಯಲ್ಲಿ ಈ ದೇವತೆಯ ಚಿತ್ರವನ್ನು ಚಿತ್ರದುರ್ಗದ ಕೋಟೆಗಳಲ್ಲಿ ಆರಾಧಿಸುತ್ತಿರುವುದು ಕಂಡುಬಂದಿದೆ (ಶಕುಂತಲಾ ೨೦೦೮:೪೫ ; ಗಾಯಕ್ವಾಡ್ ೨೦೦೩:೬೭).

## ಮೌಖಿಕ ಸಾಹಿತ್ಯದಲ್ಲಿ ಕೋಟೆಯ ಚಿತ್ರಣ

ಚಿತ್ರದುರ್ಗದ ಏಳುಸುತ್ತಿನ ಕೋಟೆ ಜನಪದರಲ್ಲಿ ತನ್ನದೇ ಆದ ಸ್ಥಾನ ಪಡೆದುಕೊಂಡಿದೆ. ಜನಪದರು ಚಿತ್ರದುರ್ಗದ ಕೋಟೆಯನ್ನು ದುರ್ಗದ ಕ್ವಾಟೆಯೆಂದೇ ಸಂಬೋಧಿಸುತ್ತಾರೆ. ಈ ಪರಿಸರದ ಸುತ್ತಮುತ್ತಲಿನ ಜನರು ಇವನ್ನು ಚಿತ್ರದುರ್ಗವೆಂದು ಹೇಳುವುದು ತುಂಬಾ ಕಡಿಮೆ. ದುರುಗವೆಂದೇ ಸಂಬೋಧಿಸುವುದು ಹೆಚ್ಚು. ಚಿತ್ರದುರ್ಗ ಎಂಬ ಈ ಅಭಿದಾನದಲ್ಲಿ ದುರ್ಗ ಎಂಬ ಪದವೂ ಸೇರಿಕೊಂಡಿದೆ. ಇದರ ರಚನೆಯನ್ನು ಕಣ್ಣಾರೆ ಕಂಡಿದ್ದಿರಬಹುದಾದಂಥ ಜನಪದರು ಈ ಬಗ್ಗೆ ಪದಕಟ್ಟಿ ಹಾಡಿದ್ದಾರೆ. ಈ ಗೀತೆಗಳು ಮದಕರಿನಾಯಕ, ಕೋಟೆಬಾಗಿಲು, ಕೋಟೆಯ ದೇವರು, ಕೋಟೆಯ ಮೇಲಿದ್ದ ಫಿರಂಗಿ, ಕಂದಕ ಮುಂತಾದವುಗಳಿಗೆ ಸಂಬಂಧಪಟ್ಟಿವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಬರಹಗಾರರಾದ ಶ್ರೀಧರಮೂರ್ತಿ (೧೯೭೨), ಪ್ರಭಾಕರ (೧೯೯೧), ಪುಟ್ಟಣ್ಣ ಎಂ.ಎಸ್. (೧೯೯೭), ತೆಲಗಾವಿ ವೆಂಕಣ್ಣಾಚಾರ್ (೧೯೭೯), ಮೀರಸಾಬಿಹಳ್ಳಿ ಶಿವಣ್ಣ (೧೯೯೯), ತಿಪ್ಪೇಸ್ವಾಮಿ ಎಂ.ಎಸ್. (೨೦೦೪), ಗಿರಿಜ ಟಿ. (೧೯೯೧), ರಾಧಾಕೃಷ್ಣಮೂರ್ತಿ (೧೯೯೦), ಪುರುಷೋತ್ತಮ ಬಿಳಿಮಲೆ (೨೦೦೪), ಚೆಲುವಾರಾಜ (೨೦೦೦), ನರಸಿಂಹಶಾಸ್ತ್ರೀ (೧೯೪೯), ವಿಶ್ವೇಶ್ವರಪ್ಪ (೧೯೮೩) ಮುಂತಾದವರ ಬರಹ ಮತ್ತು ಆಕರಗಳನ್ನು ಈ ವಿಷಯಕ್ಕೆ ಸಂಬಂಧಿಸಿದಂತೆ ಬಳಸಿಕೊಳ್ಳಲಾಗಿದೆ. ಇಲ್ಲಿ ಮುಖ್ಯವಾಗಿ

೧. ಕೋಟೆ ವರ್ಣನೆಯ ಜೊತೆಗೆ ಕಂದಕ ಮತ್ತು ಕಾಲುವೆಗಳನ್ನು ವರ್ಣಿಸಿದ್ದಾರೆ.

೨. ಮದಕರಿನಾಯಕನು ಯುದ್ಧಕ್ಕೆ ಹೊರಡುವ ಸಮಯವನ್ನು ಹಾಗೂ ಅಪಶಕುನವನ್ನು ವರ್ಣಿಸಲಾಗಿದೆ.

೩. ಮಕ್ಕಳಲ್ಲಿ ದುರ್ಗದ ಬಗ್ಗೆ ಇದ್ದ ಅಭಿಮಾನವನ್ನು ತಿಳಿಸುತ್ತದೆ.

೪. ಫಿರಂಗಿಗಳ ಬಗ್ಗೆ ವರ್ಣನೆಯನ್ನು ಮಾಡಲಾಗಿದೆ.

೫. ತಿಮ್ಮಣ್ಣನಾಯಕ ಕುದುರೆ ತಂದ ಪರಿ ಮತ್ತು ಓಬವ್ವಳ ಬಗ್ಗೆ ತಿಳಿಸಲಾಗಿದೆ.

೬. ಮದಕರಿ ನಾಯಕನು ಆನೆ ಮೇಲೆ, ಒಂಟೆ ಮೇಲೆ, ಪಲ್ಲಕ್ಕಿ ಮೇಲೆ ಹೋಗುವಾಗ ಹೂ ಸುರಿಯುವಂತೆ ವರ್ಣಿಸಲಾಗಿದೆ.

೭. ಭಟರಾಜರು ಭರಮಪ್ಪನಾಯಕನ ಪರಾಕ್ರಮವನ್ನು ಹೊಗಳಿರುವ ಪರಿಕರೆ.

೮. ಚಿತ್ರದುರ್ಗ ಎಂದರೆ ಕೋಟೆ, ರಾಜ ಎಂದರೆ ಅದು ಮದಕರಿಯೇ ಎಂಬುದಾಗಿ ವರ್ಣಿಸಲಾಗಿದೆ.

೯. ಯುದ್ಧಕ್ಕೆ ಹೊರಡುವಾಗ ಮದಕರಿನಾಯಕನು ಎಲ್ಲಮ್ಮಳನ್ನು ಕುರಿತು ಮಾಡಿದ ಪ್ರಾರ್ಥನೆಯನ್ನು ವರ್ಣಿಸಲಾಗಿದೆ.

೧೦. ಮದಕರಿನಾಯಕನು ಯುದ್ಧಕ್ಕೆ ಹೊರಡುವ, ಕೋಟೆಯ ವರ್ಣನೆ, ಮಠದ ವಿವರಗಳನ್ನು ಮನಸಾರೆ ಹೊಗಳಿ ಹಾಡಿದ್ದಾರೆ.

೧೧. ಮದಕರಿನಾಯಕನು ಹೈದರಾಲಿಗೆ ಸೆರೆ ಹೋದ ಪರಿಕರಗಳನ್ನು ವಿವರಿಸಲಾಗಿದೆ.

೧೨. ಮದಕರಿನಾಯಕನ ಜನಾಂಗದವರು ಜೀವನದ ಹಂಗು ತೊರೆದು ಕೋಟೆಗಳನ್ನು ನಿರ್ಮಿಸಲಿಕ್ಕೆ ಹಾಗೂ ಇದು ತಮ್ಮ ಪ್ರತಿಷ್ಠೆಯ ವಿಚಾರವನ್ನಾಗಿ ಭಾವಿಸುತ್ತಿರುವ ವರ್ಣನೆ ನೀಡಲಾಗಿದೆ.

೧೩. ಚಿತ್ರದುರ್ಗದ ಕೋಟೆಯನ್ನು ಕಟ್ಟಿದುದುರ ಬಗ್ಗೆ ವರ್ಣನೆ ಇದೆ.

೧೪. ಹೈದರಾಲಿ ದಾಳಿಯ ಸಂದರ್ಭ, ಮತ್ತು ಚಿತ್ರದುರ್ಗದ ಕೋಟೆಗೆ ಯಾವುದೇ ಭಯವಿಲ್ಲ ಎಂಬುದಾಗಿ ಹಾಡಿದ್ದಾರೆ.

೧೫. ನಾಯಕರು ಗೆದ್ದ ಕೋಟೆಗಳ ಬಗ್ಗೆ, ದುರ್ಗದ ಕೋಟೆಗೆ ಮತ್ತಾವುದು ಸರಿಸಾಟಿವಿಲ್ಲವೆನ್ನುವಂತೆ ವರ್ಣಿಸಿದ್ದಾರೆ.

೧೬. ಮದಕರಿನಾಯಕನು ಮಾಯಕೊಂಡದಲ್ಲಿ ಜರುಗಿದ ಯುದ್ಧದ ಬಗ್ಗೆ ವಿವರಣೆ ನೀಡಿದ್ದಾರೆ.

೧೭. ಮದಕರಿನಾಯಕನನ್ನು ಹೆಬ್ಬುಲಿಗೆ ಹೋಲಿಸಿ ಹೊಗಳಿದ್ದಾರೆ.

೧೮. ಮದಕರಿನಾಯಕನು ದೇವಿಯ ವರ ಕೇಳಿದಾಗ ಇವನ ಆಯುಷ್ಯ ಇಲ್ಲಿಗೆ ಸಮನಾಯಿತು ಎಂಬಂತೆ ಅಪಶಕುನ ಮತ್ತು ರಣರಂಗದ ಭೀಕರತೆಯ ಬಗ್ಗೆ ವರ್ಣಿಸಲಾಗಿದೆ.

೧೯. ಮಾಯಕೊಂಡದ ಯುದ್ಧದಲ್ಲಿ ಹಿರೇಮದಕರಿನಾಯಕನು ಮಡಿದ ವಿಷಯವನ್ನು ಹುಲಿಯು ಹಿಂದಿರುಗಿ ಗವಿ ಸೇರಿತು ಎಂಬ ವಿವರಣೆಯನ್ನೊಳಗೊಂಡಿದೆ.

೨೦. ಮದಕರಿನಾಯಕನನ್ನು ವಜ್ರಕ್ಕೆ ಹೋಲಿಸುತ್ತ ಮುಸ್ಲಿಂರಿಗೆಲ್ಲ ಕಡುವೈರಿಯಾಗಿದ್ದ ಈ ಬೇಡಜನಾಂಗದವನು ಎಂಬುದನ್ನು ವರ್ಣಿಸಿದ್ದಾರೆ.

೨೧. ಮದಕರಿ ನಾಯಕನಿಗೂ ಚಿತ್ರದುರ್ಗಕ್ಕೂ ಬಹಳ ದಿನದ ಸಂಬಂಧವಿರದೇ ಕೆಲವೇ ಕಾಲದಲ್ಲಿ ಅಂತ್ಯವಾದನೆಂಬುದನ್ನು ವೈಭವೀಕರಿಸಲಾಗಿದೆ.

೨೨. ಮದಕರಿನಾಯಕನು ಯುದ್ಧದಿಂದ ಬದುಕಿ ಬಂದರೆ ಹರಕೆಯನ್ನು ತೀರಿಸುವುದಾದ ವರ್ಣನೆ ಇದೆ.

೨೩. ಮದಕರಿನಾಯಕನ ಅಂತ್ಯವನ್ನು ಯಾವ ರೀತಿಯಾಯಿತು ಎಂಬುದನ್ನು ವರ್ಣಿಸಲಾಗಿದೆ.

೨೪. ಕೋಟೆಯು ಅನಾಹುತಕ್ಕೆ ಒಳಗಾದಾಗ ಕೊಡುವ ಮುನ್ಸೂಚನೆಗಳ ಬಗ್ಗೆ ವಿವರಿಸಲಾಗಿದೆ.

೨೫. ಕೋಟೆಯು ಹೊಂದಿರುವಂತೆ ಅಂಗಾಂಗಗಳನ್ನು ಹರಿಹರನು ವರ್ಣಿಸಿದ್ದಾನೆ.

೨೬. ಚಿತ್ರದುರ್ಗದ ಕೋಟೆಯು ಯಾವ ರೀತಿಯದು ಎಂಬುದಾಗಿ ತಿಳಿಸಿದೆ.

೨೭. ಕೋಟೆ ಇಲ್ಲದ ರಾಜ ವಿಷರಹಿತ ಹಾವು ಮತ್ತು ಮದರಹಿತ ಆನೆ ಇದ್ದಂತೆ ಎಂಬುದಾಗಿ ಹೋಲಿಸಿದ್ದಾರೆ.

೨೮. ಚಿತ್ರದುರ್ಗದ ಕೋಟೆಯು ವಜ್ರದ ಅಗುಳಿಯನ್ನು ಹೊಂದಿರುವ ಕೋಟೆಯೆಂದು, ಇದನ್ನು ಬೇಧಿಸಲು ಅಸಾಧ್ಯವಾದದೆಂದು ವರ್ಣಿಸಲಾಗಿದೆ.

೨೯. ಆನೆಯಷ್ಟು ಬಲಿಷ್ಠವಾದದ್ದು ಚಿತ್ರದುರ್ಗದ ಕೋಟೆ, ಇದು ಆನೆಯಷ್ಟೇ ದೈತ್ಯಾಕಾರದ್ದು ಎಂಬುದಾಗಿ ವಿವರಿಸಿದ್ದಾರೆ.

೩೦. ಕೋಟೆಯು ನಿರ್ಮಾಣವಾದ ಪರಿಕರಗಳನ್ನು ವರ್ಣಿಸಲಾಗಿದೆ.

೩೧. ಚಿತ್ರದುರ್ಗದ ಕೋಟೆಯು ಏಳು ಕಲ್ಲಿನಲ್ಲಿ ನಿರ್ಮಿಸಿ ಅದನ್ನು ತನ್ನ ಬಲದಿಂದ ಮದಕರಿ ಆಳುತ್ತಿದ್ದನು ಎಂಬುದಾಗಿ ವಿವರಣೆಯನ್ನು ಸಾಹಿತ್ಯದ ಪದಗಳ ಮೂಲಕ ಹಾಡಿದ್ದಾರೆ.

ಈ ಮೇಲ್ಕಂಡ ವಿವರಗಳನ್ನು ಮುಂದಿನ ಕಾವ್ಯಗಳ ಸ್ವರೂಪ ಮತ್ತು ಅವುಗಳ ವಿಶ್ಲೇಷಣೆಯೊಂದಿಗೆ ನೀಡಲಾಗಿದೆ. ಅವುಗಳ ವಿವರ ಹೀಗಿವೆ.

## ಕೋಟೆ ಕಟ್ಟಿ ಆಳುವ ಬಗೆಗಿನ ಐತಿಹ್ಯ

೧. ಕಂದಕ ಮತ್ತು ಕಾಲುವೆಯ ಬಗ್ಗೆ ವಿವರಣೆಯಿದ್ದು, ಚಿತ್ರದುರ್ಗದ ನಾಯಕರು ಕೋಟೆಗಳ ರಚನೆಯ ಜೊತೆಗೆ ಕಂದಕ ಮತ್ತು ಕಾಲುವೆಗಳಿಗೂ ಮಹತ್ವ ನೀಡಿದ್ದನ್ನು ನೋಡಬಹುದಾಗಿದೆ.

ಚಿತ್ರದುರ್ಗವ ಒತ್ತಿ ಆಳುವಾಗ
ನೀನು ಒಪ್ಪೆ ಕಟ್ಟಿಸಯ್ಯ ಕೋಟೆಗಳ । ಮದಕೊರಪ್ಪ
ನೀನು ಒಪ್ಪೆ ಕಟ್ಟಿಸಯ್ಯಾ ಕೋಟೆಗಳ ॥
ಒಡ್ಡರನು ಕರೆಸಿದ ದಿಬ್ಬವ ತೆಗೆಸಿದ
ದೊಡ್ಡ ಫಿರಂಗಿ ನಿಲ್ಲಿಸಿದ ......
ಕೋಮಟಿಗರ ಕರೆಸಿದ ಕಾಲುವೆ

ತೆಗೆಸಿದ ಜೋಡಿ ಫಿರಂಗಿ ನಿಲ್ಲಿಸಿದ
ಹತ್ತಿ ಹತ್ತಿತು ಈ ಕೋಟೆ ಚಕ್ರದಿಮ್ಮನಕ್ಕೆ
ಹತ್ತಿತು ಕೋಟೆ ಗಗನಾಕೆ

ಈ ಗೀತೆಗಳು ಪಾಳೆಯಗಾರರು ಚಿತ್ರದುರ್ಗದ ಕೋಟೆಯನ್ನು ಕಟ್ಟಿ ಆಳುತ್ತಿದ್ದ ವಿವರದ ಜೊತೆಗೆ ಕೋಟೆಯ ಕಂದಕ, ಕಾಲುವೆಗಳನ್ನು ನಿರ್ಮಿಸಿದವರ ವಿವರಗಳನ್ನು ಒಳಗೊಂಡಿದೆ.

೨. ಸಮಯ ಹಾಗೂ ಅಪಶಕುನದ ಬಗ್ಗೆ ಭಾರತೀಯರಿಗೆ ಅನಾದಿ ಕಾಲದಿಂದಲೂ ಬಂದಿರುವುದನ್ನು ಗಮನಿಸಬಹುದು. ರಾಜರು, ಪ್ರಜಾಗಳಾದಿಯಾಗಿ ಇವುಗಳನ್ನು ನಂಬಿದ್ದನ್ನು ನಾವು ನೋಡುತ್ತೇವೆ. ಚಿತ್ರದುರ್ಗದ ಸಂದರ್ಭದಲ್ಲಿ ಮದಕರಿನಾಯಕನಿಗೆ ಸಂಬಂಧಿಸಿದಂತೆ ನಮಗೆ ದೊರಕುವ ಜಾನಪದ ಕಾವ್ಯದ ಪ್ರಕಾರವು ಈ ಕೆಳಕಂಡಂತೆ ವಿವರಿಸುತ್ತದೆ.

ಟಾಕೀನ ಬಾಗಿಲಬಿಟ್ಟು ಹೊರಡುವಾಗ ಸಂಪಿಗೆ ಸಿದ್ಧ
ಹಾವಾಗ ಅಡ್ಡ ಸುಳಿದ । ಕೋಲು .................
ಗಾರೆಬಾಗಿಲ ಬಿಟ್ಟು ಹೊರಡುವಾಗ ಉಚ್ಚಂಗೆಮ್ಮ
ಕಾಣೆಯಾಗಿ ಅಡ್ಡ ಸುಳಿದಾಳೊ ! ಕೋಲು ....... !!

ಇದರರ್ಥ ಚಿತ್ರದುರ್ಗದ ಪಾಳೆಯಗಾರರು ದೈವದ ಮೇಲೆ ಅಪಾರ ನಂಬಿಕೆಯಿಟ್ಟವರು. ಇವರು ಯಾವುದೇ ಯುದ್ಧ ಮಾಡಲು ಹೊರಟರೆ ಅವರು ದೇವತೆಗಳಿಗೆ ವಿಶೇಷ ಪೂಜೆ ಸಲ್ಲಿಸುತ್ತಿದ್ದರು. ಈ ದೇವತೆಗಳ ಅಪ್ಪಣೆಯನ್ನು ಪಡೆದು ಹೊರಡುತ್ತಿದ್ದರು. ಮುಂದೆ ನಡೆಯುವ ಯುದ್ಧದಲ್ಲಿ ರಾಜರು ಅಪಜಯವನ್ನು, ಸಾವನ್ನು ಪಡೆಯುತ್ತಿದ್ದ ಮುನ್ಸೂಚನೆಯನ್ನು ಕೊಡಲು ದೇವತೆಗಳು ಹಾವಾಗಿ, ಕಾಗೆಯಾಗಿ ಅಡ್ಡ ಬಂದು ರಾಜನಿಗೆ ಅಪಶಕುನವನುಂಟು ಮಾಡುತ್ತಿದ್ದವೆಂಬ ಅಭಿಪ್ರಾಯ ಮೇಲಿನ ಗೀತೆಗಳಿಂದ ವ್ಯಕ್ತವಾಗುತ್ತದೆ. ಅಲ್ಲದೆ ಚಿತ್ರದುರ್ಗದ ಕೋಟೆಯೊಳಗಿರುವ ಬಾಗಿಲುಗಳ ಪ್ರಸ್ತಾಪವೂ ಈ ಗೀತೆಗಳಲ್ಲಿ ಕಂಡುಬರುತ್ತದೆ.

೩. ಚಿಕ್ಕಮಕ್ಕಳು ಏನೂ ಅರಿಯದವರು ಎಂಬ ಮಾತಿದೆ. ಆದರೆ ಚಿತ್ರದುರ್ಗದ ಸಣ್ಣಮಕ್ಕಳಿಗೂ ಸಹ ಕೋಟೆಯ ಬಗ್ಗೆ ಇದ್ದಂತ ಅಭಿಮಾನವನ್ನು ಸೂಚಿಸುವ ಹೇಳಿಕೆಯಾಗಿದೆ. ಹಾಗೂ ಯಾವ ಅಂಶಗಳಿಗೂ ಜಗ್ಗಲಿಲ್ಲ ಎಂಬ ಅರ್ಥ ಮದಕರಿನಾಯಕನು ಏಳುಸುತ್ತನ್ನು ಕಟ್ಟಿಸಿರುವ ವರ್ಣನೆ ನೋಡಬಹುದಾಗಿದೆ.

ಈಟೀಟು ಹುಡುಗರು ಚೀಟಿ ಚೆಲ್ಲಣದೋರು
ಕೋಟೆ ಕೊಡರಣ್ಣ ಕೂಲಿಗೆ । ಅಂದಾರೆ
ತಲೆ ಹೋದ್ರು ದುರ್ಗ ಕೊಡನೆಂದ್ರು .... ।

ಇದರ ಅರ್ಥ ಮಕ್ಕಳಲ್ಲಿ ದುರ್ಗದ ಬಗ್ಗೆ ಎಂತ ಅಭಿಮಾನವನ್ನು ಮೂಡಿಸಿದ್ದಿತೆಂಬುದನ್ನು ತಿಳಿಸಿಕೊಡುತ್ತದೆ.

ನಿಂತು ನೀಡಗಲ್ಲು ಕಟ್ಟಿಸಿದ ಕುರಿತು ಕುಂದರ್ಪೆ ಕಟ್ಟಿಸಿದ
ವತ್ತಿ ಅಳೇನು ಮದಕೇರಿ । ದುರುಗದ
ಮೇಲೆ ಏಳು ಕೋಟೆಗಳ ಕಟ್ಟಿಸಿದ

ಈ ಹಾಡಿನಲ್ಲಿ ಚಿತ್ರದುರ್ಗದ ಪಾಳೆಯಗಾರರು ಕೋಟೆಗಳನ್ನು ಕಟ್ಟಿಸಿ ಆಳ್ವಿಕೆ ನಡೆಸಿರುವುದನ್ನು ಕಾಣಬಹುದು. ಅಲ್ಲದೆ ಚಿತ್ರದುರ್ಗ ಪಾಳೆಯ ಪಟ್ಟು ಪೂರ್ವದಲ್ಲಿ ನಿಡಗಲ್ಲು ಮತ್ತು ಕುಂದುರ್ಪೆವರೆಗೆ ವಿಸ್ತರಿಸಿದ್ದರು ಎಂಬುದು ಇದರಿಂದ ತಿಳಿಯಬಹುದಾಗಿದೆ. (ತಿಪ್ಪೇಸ್ವಾಮಿ ೨೦೦೪:೧೯೬)

೪. ಚಿತ್ರದುರ್ಗದ ಅಭೇಧ್ಯವಾದ ಕೋಟೆಯಲ್ಲಿ ಫಿರಂಗಿಗಳು ಹೊಂದಿದ್ದು, ಅವುಗಳು ಯಾವ ರೀತಿಯಲ್ಲಿದ್ದವು ಹಾಗೂ ತಮ್ಮ ಕಾರ್ಯ ನಿರ್ವಹಿಸುತ್ತಿದ್ದವು ಎಂಬುದರ ವರ್ಣನೆಯಿದೆ.

ಮಾರನುಮನೆಂಬೋದು ಮೀರಿದ ಫಿರಂಗಿ
ಹುಚ್ಚುನುಮನೆಂಬುದು ಹೆಚ್ಚೇನ ಫಿರಂಗಿ
ಎತ್ತೀರಿ ಮೇಲೆ ಬಂಡ್ಯಾಕೆಂದ ॥

ಕೋಟೆಯಲ್ಲಿದ್ದ ಫಿರಂಗಿಗಳಿಗೆ ಮಾನವನ ಹೆಸರಿನಿಂದ ಕರೆದು ಅವುಗಳಿಗೆ ಜೀವ ತುಂಬಿರುವ ಪರಿ ಮೇಲಿನ ಗೀತೆಗಳಿಂದ ವ್ಯಕ್ತವಾಗುತ್ತದೆ.

೫. ಚಿತ್ರದುರ್ಗದಲ್ಲಿ ಕೋಟೆ ಕಟ್ಟಿ ಆಡಳಿತ ಪ್ರಾರಂಭಿಸಿದ ತಿಮ್ಮಣ್ಣನಾಯಕನ ಪರಾಕ್ರಮವನ್ನು ಹಾಡಿಹೊಗಳಿದ್ದಾರೆ.

ಕಡಿದ ಕೈಯ್ಯಾ ತಿಮ್ಮಣ್ಣ
ಒನಕೆ ಕದನದೋಬವ್ವ
ಏಕನಾಥೆ ಉತ್ಸವಾಂಬೆ
ಸಾಕು ನೆನೆಹಲಿಕೆ ಇದೆ.........
ಕರಿಯ ಸಿಗದ ಹಿರಿಯನೋರ್ವ
ಕರೆದು ಸಿರಿ ಅಳೆದ ಧರೆ
ದುರ್ಗವರ್ಗ ಸ್ವರ್ಗವನೆ
ಅರ್ಘ್ಯನರ್ಘ್ಯದಾತ...... ದಾತ...

ಊರಿನ ಪೂರ್ವಕ್ಕೆ ವೆಂಕಟರಮಣಸ್ವಾಮಿ ದೇವಾಲಯದ ಮುಂದಿನ ತೋಪಿನಲ್ಲಿಯೇ ತಿಮ್ಮಣ್ಣನಾಯ್ಕ ಕೈಯನ್ನು ಕಡಿದುಕೊಂಡು ಶತ್ರುವಿನ ಕುದುರೆ ಬಿಚ್ಚಿ ಸವಾರಿ ಮಾಡಿಕೊಂಡು ಬಂದನಂತೆ ಅಲ್ಲಿ ಹೋಗಿನಿಂತು ಆ ವೀರನ ರಕ್ತದಿಂದ ಪವಿತ್ರವಾದ ಸ್ಥಳವನ್ನು ನೋಡಿ ಅವನ ಸಾಹಸವನ್ನು ನೆನೆಸಿಕೊಂಡು ಹೆಮ್ಮೆ ಪಡೆದಿರಲು ಸಾಧ್ಯವೇ? ಅತ್ತ ಪಶ್ಚಿಮದಲ್ಲಿ ಕೋಟೆ ಗೋಡೆಯ ಕಲ್ಲುಸಂದಿಯಲ್ಲಿ ತೂರಿಬರಲು ಪ್ರಯತ್ನಿಸಿದ ಶತ್ರುಗಳ ತಲೆಗಳನ್ನು ಒನಕೆಯಿಂದಲೇ ಒಡೆದು ಕೆಡವಿದ ವೀರ ಓಬವ್ವೆಯ ಹೆಸರಿನಿಂದಲೇ (ಓಬವ್ವಳ ಕುರಿತಾದ ಐತಿಹ್ಯಗಳ ಬಗ್ಗೆ ವಿವರವಾಗಿ ೧೦೫–೧೧೩ನೇ ಪುಟಗಳಲ್ಲಿ ಚರ್ಚಿಸಲಾಗಿದೆ) ಮೆರೆವ ಒನಕೆ ಕಿಂಡಿಯನ್ನು ನೋಡದಿರುವ ಜನ್ಮ ಎಂಥದು? ಉಚ್ಚಂಗಿ ದುರ್ಗದಿಂದ ಪಾಳೆಯಗಾರರಿಗೆ ಒಲಿದು ಬಂದು ಊರ ನಡುವೆ ವಿಶಾಲವಾದ ದೇವಾಲಯ ಕಟ್ಟಿಸಿಕೊಂಡ ಉತ್ಸವಾಂಬೆಯ ಕೃಪೆ ಒಲ್ಲೆ ಎನ್ನುವುದುಂಟೆ? ಅಲ್ಲಿ ಬೆಟ್ಟದ ಮೇಲೆ ಗುಡಿ ಕಟ್ಟಿಸಿಕೊಂಡಿರುವ ಗಣೇಶನ ತಾಯಿ, ಹಿಮಗಿರಿಯ ಪುತ್ರಿ ಏಕನಾಥೇಶ್ವರಿಯನ್ನು ಮರೆಯಲು ಸಾಧ್ಯವೇ? (ಶ್ರೀಧರಮೂರ್ತಿ ೧೯೭೨:೫)

೬. ದುರ್ಗದಲ್ಲಿ ನಾಯಕ ಅರಸರು ಯಾವ ರೀತಿಯ ಅಭಿಮಾನವನ್ನು ದುರ್ಗದ ಜನತೆಯಿಂದ ಪಡೆದಿದ್ದರೆಂಬುದು ಹಾಗೂ ದಾರಿಯುದ್ಧಕ್ಕೂ ಬರುವ ವೈಖರಿಯನ್ನು ಹಾಡಿ ಹೊಗಳಿದ್ದಾರೆ.

ಆನೆಮ್ಯಾಲೆ ಅಂಬಾರಿ, ಒಂಟೆಮೇಲೆ ರಣಭೇರಿ
ಪಲ್ಲಕ್ಕಿಯೊಳಗೆ ಬರವ್ರೋನು । ಮದಕೇರಿ
ಮಲ್ಲಿಗೆ ಹೂವ ಸುರಿಬಿಡಿರಿ
(ಪ್ರಭಾಕರ ೧೯೯೧:೧)

೭. ಚಿತ್ರದುರ್ಗದ ನಾಯಕರು ಶೂರರು, ಕರುಣಾಮಯಿಗಳು ಇವರ ಮಾತುಗಳು ರಾಮನ ಬಾಣದಂತೆ ನೇರವಾಗಿ ಇರುತ್ತಿದ್ದವರು ಎಂಬುದರ ಬಗ್ಗೆ ವರ್ಣನೆ ನೀಡಿದ್ದಾರೆ.

ಭುವನದೊಳ ಚಿನ್ಮೂಲಾದ್ರಿಯ ರಾಜಧಾನಿಯೋಳ್ ॥
ಯುವ ರಾಜಸ್ಥಿರ ಪಟ್ಟಭದ್ರ, ಕರುಣಸಮುದ್ರ, ಪರೆಸೈನ್ಯವಿದ್ರ ॥
ಶರಧಿ ಮಧ್ಯದಲಿ ಚಂದಿರನುಸಿದಂದಲಿ
ವರಕಾಮಗೇತಿ ವಂಶದೊಳು ಪುಟ್ಟಿ, ಸೌಖ್ಯದೊಳು ಬಾಳುಕೃಪಾಳು ॥
ಖಾನಖಾನರನೆಲ್ಲಸದೆದು ಕಪ್ಪವ ತಂದೆ ।
ಈ ನಿನ್ನ ಶೌರ್ಯಕಣೆ ಇಲ್ಲ, ರಣರಂಗಮಲ್ಲ, ನಿನಗೆ ಸರಿ ಇಲ್ಲ॥
ಅದಕಂಡು ಮೆಚ್ಚಿಪಾಭಾವ ದೊಡ್ಡೇರಿಯನ್ನು ಮುದದಿಂದ ಕೊಡಲು ಕೈಕೊಂಡ॥

ಕದನ ಪ್ರಚಂಡ
ಭಾಪುದೋರ್ದಂಡ ॥
ಮೈಲಾರ ಮೊದಲಾದ ಸೀಮೆಗಳ ಜೈಸಿಕೊಂ । ಡೇಳಿಗೆಯ ಭುಜಶಕ್ತಿಯಿಂದೆ
ದುರ್ಗಕ್ಕೆ ತಂದೆ ।
ತೂರ್ಯರವದಿಂದೆ ॥
ಇದಿರುದಂಡನುಬಿಟ್ಟು ಒದಗಿಸಮನಾಳಗದಿ ।
ಕದನವನುಗೆಲಿದ ಹಮ್ಮಿರ ।
ಭಲರೆ ಮೊನೆಗಾರ ।
ಅಸಹಾಯಶೂರ ।
ಚಿನ್ಮೂಲಗಿರೀಶ ।
ಮೊನ್ನೆಯಲಲಾಮ ।
ಅಮಿತಗುಣಧಾಮ ॥
ಕೊಡಗೈಯ್ಯ ಕರ್ಣ ।
ಕರುಣಾಸಂಪೂರ್ಣ ।
ನುಡಿರಾಮಬಾಣ ॥
ನೂತನ ಶರೀರ । ಮಾರನವತಾರ । ನೆರೆಪುಣ್ಯಕಾಂತ
ಪರಮಾಯುವಂತ ॥

ಭರಮಪ್ಪನಾಯಕನ ಪರಾಕ್ರಮವನ್ನು ಹೊಗಳಿ ಭಟರಾಜರು ಹೇಳುವ ಸಮರ ವಿಜಯದ ಬಗೆಗೆ ನೀಡಿರುವ ವರ್ಣನೆ (ಪುಟ್ಟಣ್ಣ ೧೯೯೭:೬೨)

೮. ಚಿತ್ರದುರ್ಗದ ಸುತ್ತಮುತ್ತಲಿನ ಜನತೆಯು ಎಲ್ಲಿಗೆ ಹೋದರೂ ಕೋಟೆಗೆ ಬರುತ್ತಿದ್ದರು. ಅವರನ್ನು ಮನಃಪೂರ್ವಕವಾಗಿ ಸ್ವಾಗತಿಸಿದ್ದರು ನಾಯಕರು. ಹಾಗೂ ಕೋಟೆಯು ಸಹ ನಾಗರಹಾವಿನ ತರಹ ಬಳಕಾಗಿದ್ದಿತು ಎಂಬುದನ್ನು ವರ್ಣಿಸಿದ್ದಾರೆ.

ಗೊಲ್ಲಗೌಡನಿದ್ದೋನೆ ತನ್ನೆಲ್ಲಾ ಕಾಲ್ನಡೆಗಳ್ನೂವಡ್‌ಕಂಡು ಗೋಳೀವವಂಟ
ಅಂದರೆ ಎತ್ಲಗೊಂಟ ಚಿಂತಕರ ಕಲ್ಲುದುರುಗದ
ಕಡೆಗೊಂಟ, ಏನ್ರಿ ಆ ಕಾಲ್ದಲ್ಲಿ ಚಿಂತಕಲ್ಲು ಅಂದ್ರೆ
ಪ್ರಬುದ್ಧಮಾನ ಸ್ಥಿತಿವಳಗಿತ್ತು ಸ್ವಾಮಿಗಳೊಮಟವಿತ್ತು
ಪುಣ್ಯ ಪುನಸ್ಕಾರಗಳು ದೇವ್ತಸೇವೆಗಳು

ಇಂಗೆ ಧರ್ಮವಂತ್ರು ಅಲ್ಲಿದ್ರು
ಮದಕರಿಭೂಪ್ರು ಆಳ್ತಾ ಇದ್ರು
ನಾಗರಹಾವು ಸಂಪತ್ನ ಬಳಸ್ಕಂಡಂಗೆ ಕ್ವಾಟೆ ಇತ್ತು ॥

ಚಿತ್ರದುರ್ಗ ಎಂದರೆ ಕೋಟೆ ಅಲ್ಲಿಯ ರಾಜ ಎಂದರೆ ಮದಕರಿನಾಯಕನೇ ಎಂದು ಜನಪದರು ಕೊಂಡಾಡಿದ್ದಾರೆ. ದುರ್ಗದ ಪಾಳೆಯಗಾರರು ತಮ್ಮದೊಂದು ರಾಜಧಾನಿಗೆ ಕಟ್ಟಿಕೊಂಡ ಸುತ್ತು ಸುತ್ತುಗಳ ಕೋಟೆಯ ರಚನೆ ಆಶ್ಚರ್ಯಕರ ರೀತಿಯಲ್ಲಿದ್ದಿತು (ತೆಲಗಾವಿ ವೆಂಕಣ್ಣಾಚಾರ್ ೧೯೭೯:೨೧).

೯. ಈಡೀ ಚಿತ್ರದುರ್ಗದ ಪ್ರದೇಶವನ್ನೇ ಕೋಟೆಗಳ ರಚನೆಯಿಂದ ಅಲಂಕರಿಸಿದ್ದ ಮದಕರಿನಾಯಕರು ಯಾವ ರೀತಿಯಿಂದ ಕಟ್ಟಿಸಿದರು ಹಾಗೂ ಪ್ರತಿ ಕೋಟೆಯಲ್ಲೂ ಅವರು ಕಾಣಿಸುತ್ತಿದ್ದರು ಎಂಬುದಾಗಿ ವರ್ಣಿಸಲಾಗಿದೆ.

೯. ಚಿತ್ರದುರ್ಗದ ನಾಡವತ್ತಿ ಆಳೋನಯ್ಯ
ಹೇಳಿಕಟ್ಟಿಸಿದ ಮದಕೇರಪ್ಪ
ಅವ್ನು ಏಳುಸುತ್ತಿನ ಕ್ವಾಟಿಗೊಳಗವ್ನೆ ।

ಏಳುಸುತ್ತಿನ ಕ್ವಾಟಿ ಹೇಳಿ ಕಟ್ಟಿಸಿದನಯ್ಯ
ಚಿತ್ರದುರ್ಗದ ನಾಡ ಮದಕೇರಪ್ಪ
ಅವ್ನು ಏಳುಸುತ್ತಿನ ಕ್ವಾಟೆಗವ್ನೆ

ಏಳುಸುತ್ತಿನ ಕ್ವಾಡೆಗಳಗವ್ನೆ ಮದಕರಿ
ಮಹನಾಡು ಎದ್ದು ಬರುವಾಗ
ಮದಕೇರಪ್ಪ ಬರುವಂಥ ದಂಡ ತಿರಿವ್ಯಾನೆ.,

ನಿಂತು ನಿಡುಗಲ್ಲು ಕಟ್ಟಿಸಿದ ಕುಂತು
ಕುಂದುರ್ಪೆ ಕಟ್ಟಿಸಿದ
ವತ್ತಿ ಆಳೋನು ಮೆದಕೇರಿ
ದುರುಗದ ಮೇಲೆ ಏಳುಕೋಟೆ ಕಟ್ಟಿಸಿದ

ಮೇಲುದುರುಗದ ಮೇಲೆ ಏಕನಾಥ ಎಲ್ಲಮ್ಮಗೆ
ಕಾಯೊಡೆದು ಕಯ್ಯಮುಗಿದ ಕೋಲು
ಏನಮ್ಮ ನನತಾಯಿ ಭಿನ್ನಹ ಮಾಡೇನು

ಎನಗೊಂದು ಮಾತನ್ನೇಳು ಕೋಲುಕತ್ತಿಯ

ಕಾರ್ಯವು ಕೈಗೂಡಿ ಬಂದರೆ ಹಸ್ತದ

ಪುಷ್ಪವ ಕೊಡಕೋಲು

ಯುದ್ಧಕ್ಕೆ ಹೊರಡುವ ಮುನ್ನ ಏಕನಾಥೇಶ್ವರಿಯ ಬಗ್ಗೆ ಮದಕರಿನಾಯಕ ಮಾಡಿದ ಪ್ರಾರ್ಥನೆಯನ್ನು ಕೋಲು ಹೊಯ್ಯುವುದರ ಮೂಲಕ ಹಾಡಿದ್ದಾರೆ

೧೦. ಮದಕರಿ ನಾಯಕನು ಯುದ್ಧಕ್ಕೆ ಹೊರಡುವ ಸಂದರ್ಭದಲ್ಲಿ ಯಾವ ರೀತಿಯ ಅಪಶಕುನಗಳು ಕಾಣುತ್ತಿದ್ದವು ಹಾಗೂ ಇದರ ಪರಿಣಾಮ ಏನಾಗುತ್ತಿದ್ದಿತು ಎಂಬುದನ್ನು ಕೋಲು ಒಯ್ಯುವುದರ ಮೂಲಕ ಸೊಗಸಾಗಿ ಹಾಡಿದ್ದಾರೆ.

ಅರಸು ಮದಕೇರಣ್ಣ ಅಂದಣವನೇರಿ

ಹೊರಟಾನೊ ನೀರಥಡಿಗೇ ಕೋಲು.

ಅಂಗಳವ ತಾಬಿಟ್ಟು ಹೊರಟಾಗ 

ಸಂಪಿಗೆ ಸಿದ್ದ ಹಾವಾಗಿ ಅಡ್ಡ ಸುಲಿದ ಕೋಲು......

ಗಾರೆಬಾಗಿಲ ಬಿಟ್ಟು ಹೊರಡುವಾಗ

ಉಚ್ಚಂಗಮ್ಮ ಕಾಗೆಯಾಗಿ ಅಡ್ಡಸುಳಿದಾಳೋ ಕೋಲು......

ಕಾಗೆಯ ಶಕನವು ನಮಗ್ಯಾತಕ್ಹತ್ತೇತು

ನಡಸಯ್ಯ ಮುಂದಕ್ಕಾನೆಯ ಕೋಲು.........

ಅಂತರಕಲ್ಲು ದುರುಗ ಯಂತೋರು ಆಳಿದರೆ

ಜಂತದಪಾಲಕಿ ಶರಣಾರು । ಮುರುಘೇ ಸ್ವಾಮಿ

ಪಂತಕೆ ಆಳಿದರು ದುರುಗಾವ !!

ಚಿನ್ನದ ನಗಾರಿ ಇನ್ನೆಲ್ಲಿ ಬಡಿದಾರು

ಸಣ್ಣ ದುರುಗದ ಬಯಲಾಗೆ ! ಮುರುಘೇ ಸ್ವಾಮಿ

ಬನ್ನೀಯ ಮುಡಿದು ಹೊರಟರು !!

ಬಾಳೆಕಾಯ ಚಂದ ಬಾಳೆ ಹೂ ಚಂದ

ದುರುಗದ । ಊರಮುಂದೆ

ಸ್ವಾಮಿ ಮುರುಘಯ್ಯ ಮಠ ಚೆಂದ......

ಈ ಮೇಲಿನ ಎರಡೂ ಗೀತೆಗಳ ಅರ್ಥ– ಮದಕರಿನಾಯಕ ಚಿತ್ರದುರ್ಗವನ್ನು ಆಳುತ್ತಿದ್ದ ಬಗ್ಗೆ ಹಾಗೂ ಏಳುಸುತ್ತಿನ ಕೋಟೆಯನ್ನು ಕಟ್ಟಿಸಿದ್ದರ ಬಗ್ಗೆ ತಿಳಿಸುತ್ತವೆ (ವೆಂಕಣ್ಣಚಾರ್ ೧೯೭೯:೨೧).

೧೧. ಮದಕರಿ ನಾಯಕನು ಹೈದರಾಲಿಗೆ ಸೆರೆಹೋದ ಪರಿಕರಗಳನ್ನು ಹಾಡಿದ್ದಾರೆ.

ಊರನೇ ಕಟ್ಟಿಸಿರುವ ಧೀರೆಲ್ಲಿಗೋದಾನೆ
ಕಾಮನಬಾವಿ ಕರುವರ್ತಿ ! ಕಟ್ಟಿಸಿರುವ
ಧೀರಮದಕೇರಿ ಸೆರೆಹೋದ !!
ಪಟ್ಟಣದ ಕಟ್ಟಿಸಿರುವ ಶೆಟ್ಟಿಲ್ಲಿಗೋದಾನೆ
ಉಚ್ಚಂಗಿ ಹೊಂಡ ಮೇಲುದುರ್ಗ ! ಕಟ್ಟಿಸಿರುವ
ಶೆಟ್ಟಿ ಮೆದಕೇರಿ ಸೆರೆಹೋದ !!
ತುರುಕಾರ ಲಗ್ಗೆ
ಕೋಟೆ ಮುಂದಾಗಲುವಾಗ
ಅಪ್ಪ ಮದಕರಿಯೇ ಸೆರೆಹೋಗುತಾನೆ
ಅಪ್ಪ ಮದಕರಿಯೇ ಕೈ ಸೆರೆಹೋಗುವಾಗ
ತಿರುಗಿ ನೋಡಾನೋ ದುರುಗಾವ !!

(ಪ್ರಭಾಕರ ೧೯೯೧:೭೬)

೧೨. ಬ್ಯಾಡಾರ ದಂಡು ಬೇಲ್ಗುಂಟಾ ಬರುವಾಗ
ಬೆಳ್ಳಿಯ ಕವಣೆ ಬಲಗೈಲಿ– ಕರಿಯಣ್ಣ
ಜಂಗೂಸಿ ಹೊಡೆದ ತೆಲಿ ನೂರು
ಒಬ್ಬಾನೆ ಕರಿಯಣ್ಣ ದಿಬ್ಗುಂಟು ಬರುವಾಗ
ಕಬ್ಬಕ್ಕಿ ಹಿಂಡುಗವುದಂಗೆ : ಬ್ಯಾಡರ ದಂಡು
ಒಬ್ಬನ ಕೂಟೆ ಕಾದಿ ಮಡಿದಾರು

ಎಂದು ಜನಪದ ಕವಿ ಅತ್ಯಂತ ಶಕ್ತಿಶಾಲಿಯಾದ ಕಾವ್ಯಚಿತ್ರ ಕೊಡುತ್ತಾನೆ. ಆದರೆ ಕರಿಯಣ್ಣನನ್ನು ಕೊಂದು ದೇವರನ್ನು ವಶಮಾಡಿಕೊಂಡ ಭರಮಣ್ಣ ನಾನಾ ಕಷ್ಟನಷ್ಟ ಪಟ್ಟು ಮತ್ತೆ ಗೊಲ್ಲರಿಗೆ ದೇವರನ್ನು ವಹಿಸಿಕೊಟ್ಟು, ಆ ದೇವರ ಪರಮಭಕ್ತನಾಗುತ್ತಾನೆ. ಬಹುಶಃ ಈ ಕತೆ ಪೂರ್ವಕಾಲದಿಂದಲೂ ಬೇಡರಿಗೂ ಗೊಲ್ಲರಿಗೂ ಇದ್ದ ವೈಷಮ್ಯದ ಕತೆಯನ್ನು ಮತ್ತೆ ಸಾಂಕೇತಿಕವಾಗಿ ಹೇಳುವುದರೊಂದಿಗೆ ಇತಿಹಾಸದ ಕತ್ತಲೆಯ ಮೇಲೆ ಈ ಜನಪದಚಿತ್ರ ಬೆಳಕು ಚೆಲ್ಲುತ್ತದೆ.

ಪಾಳೆಯಗಾರರು ತಮ್ಮ ನಾಡಿನ ಗಡಿಗಳನ್ನು ಜೀವನದ ಹಂಗು ತೊರೆದು ರಕ್ಷಿಸಿಕೊಳ್ಳುತ್ತಿದ್ದರು. ಇದನ್ನು ಅವರು ತಮ್ಮ ಪ್ರತಿಷ್ಠೆಯ ಪ್ರಶ್ನೆ ಎಂದು ಭಾವಿಸುತ್ತಿದ್ದರು. ತಮ್ಮ ಸಾರ್ವಭೌಮತೆಗೆ ಭಂಗ ಬಂದಾಗಲೆಲ್ಲಾ ಸಿಂಹದಂತೆ ಸಿಡಿದೇಳುತ್ತಿದ್ದರು.

೧೩. ಪಾಳೆಯಗಾರರ ಪರಾಕ್ರಮ-ಪ್ರತಿಷ್ಠೆಗಳ ಸಂಕೇತದಂತಿರುವ ಚಿತ್ರದುರ್ಗ ನಾಡನ್ನು ಕಟ್ಟಿಸಿದ ಕತೆ ಹಲವು ಹತ್ತು ರೀತಿಯಲ್ಲಿ ವ್ಯಕ್ತವಾಗಿದೆ.

ಮೇಲು ದುರುಗವು ನೋಡೆ ಗಾರೆ ಬಾಗಿಲ ನೋಡೆ
ಹೋಗಿ ಮಾತಾಡೋ ಗಿಣಿ ನೋಡೆ । ಮೆದಕೇರ್ಯಣ್ಣನ
ಭಾರಿ ನಡುಗಾರೆ ಮನಿ ನೋಡೆ
ಏಳುಸುತ್ತಿನ ಕ್ವಾಟೆ ಹೇಳಿ ಕಟ್ಟಿಸಿದನಯ್ಯ
ಚಿತ್ರಕಲ್ಲು ದುರುಗದ ನಾಡ । ಮೆದಕೇರಪ್ಪ
ಅವುನು ಏಳುಸುತ್ತಿನ ಕೋಟೆ ಒಳಗವುನೆ

ಎಂದು ಕೋಟೆಯನ್ನು ಕುರಿತು ಮುಕ್ತ ಕಂಠದಿಂದ ಹಾಡಿ ಹೊಗಳುವಲ್ಲಿ ಅಭಿಮಾನ ತುಂಬಿ ತುಳುಕುತ್ತದೆ.

೧೪. ಚಿತ್ರದುರ್ಗವೆಂದರೆ ಅಭೇಧ್ಯವಾದ ಕೋಟೆ, ಆದರೂ ಅದನ್ನು ಬೇಧಿಸಿ ಕೋಟೆಯಲ್ಲಿ ಮುಸ್ಲಿಂರು ಹೊಕ್ಕಾಗ ಯಾವ ರೀತಿಯ ಸಮಸ್ಯೆಗಳನ್ನು ಅನುಭವಿಸುತ್ತಾರೆ ಎಂಬುದರ ವರ್ಣನೆಯನ್ನು ನೀಡಿದ್ದಾರೆ.

ಏರಲಾಗದ ಗುಡ್ಡ ಏರ್‍ಯಾರೆ ತುರುಕರು
ಏರೀ ಮತ್ತಿಳಿಯ ದಾರಿ ಅರಿಯಾರು । ತುರುಕರು
ನೀರಿಗೆ ಬಾಯ ಬಿಡುತಾರೆ

ಎಂದು ಏಳುಸುತ್ತಿನ ಕೋಟೆಯ ಅಭೇದ್ಯತೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಎದ್ದೇಳೋ ಮೆದಕೇರಿ ಎಷ್ಟೊತ್ತು ಮಲಗಿದ್ದಿ
ವಾಲೆ ಬಂದಾವೆ ನಿಮ್ಮ ಚದರೀಗೆ

ಎಂಬ ನುಡಿ ತುಂಬಾ ಜನಪ್ರಿಯವಾಗಿ ಮತ್ತೆ ಮತ್ತೆ ಬಳಕೆಯಾಗುವುದನ್ನು ನೋಡಬಹುದು. ದೇವರನ್ನು ನಿದ್ರೆಯಿಂದ ಏಳಿಸುವ 'ಸುಪ್ರಭಾತದ ಪ್ರಾರ್ಥನೆ'ಯನ್ನು ನೆನಪಿಗೆ ತರುವುದರೊಂದಿಗೆ 'ರಾಜಾ ಪ್ರತ್ಯಕ್ಷ ದೇವತಾ' ಎಂದು ಆ ಜನ ಭಾವಿಸಿದುದನ್ನು ಇಲ್ಲಿ ತೋರಿಸುತ್ತದೆ. 'ದೊರೆಯ ಬಗೆಗಿನ ಅವರ ಅಭಿಮಾನ ಯಾವ ಮಟ್ಟದಲ್ಲಿದೆಯೆಂದರೆ-

ಹಟ್ಟಿಯ ಕಲ್ಲು ಕಾಣೋ ಪಟ್ಟಣದ ದೊರೆ ಕಾಣೋ
ಪುಟ್ಟ ಮುತ್ತು ಕಾಣೋ ಮೆದಕೇರಿ । ನೀನಿರುವ
ಪಟ್ಟಣಕಿನ್ನೇನು ಭಯವಿಲ್ಲ

ಎಂದು ಹೃದಯ ತುಂಬಿ ಹಾಡುತ್ತಾರೆ.

ದುರ್ಗದ ದೊರೆಗಳು ತಮ್ಮ ಸಾಹಸ, ಶೌರ್ಯ, ಪರಾಕ್ರಮಗಳಿಂದ ಎಲ್ಲೆಲ್ಲೂ ಕೋಟೆಗಳನ್ನು ಕಟ್ಟಿ ಅವುಗಳಿಗೆ ತಮ್ಮ ಹೆಸರುಗಳನ್ನೇ ಇಟ್ಟಿರುವುದು ಅವರ ಸಾಧನಾಶಕ್ತಿಯ ದ್ಯೋತಕಗಳಾಗಿವೆ.

೧೫. ಚಿತ್ರನಾಯಕನಹಳ್ಳಿ, ತಿಮ್ಮಣ್ಣನಾಯಕನ ಕೋಟೆ (ಟಿ.ಎನ್.ಕೋಟೆ), ಮದಕರಿ ನಾಯಕನ ಕೋಟೆ, ಜಂಪಣ್ಣನಾಯಕನ ಕೋಟೆ (ಜೆ.ಎನ್.ಕೋಟೆ), ಭರಮಣ್ಣ ನಾಯಕನ ದುರ್ಗ (ಬಿ.ದುರ್ಗ), ಹೀಗೆ ಚಿತ್ರದುರ್ಗದ ಸುತ್ತ ಅನೇಕ ಕೋಟೆಗಳನ್ನು ಕಟ್ಟಿಸಿದ್ದಾರೆ. 'ದುರುಗ ದುರುಗೆಂದ್ರೆ ಇದೆಂಥಾ ದುರುಗಾವೆ ಕಳ್ಳಿ ಕಡಿದರೆ ಕಳ್ಳಿ ಚಿಗುತಾವೆ' ಎನ್ನುವಂತೆ ಬೆಳೆಯುವ ದುರ್ಗದ ಕೋಟೆಯ ಬಗ್ಗೆ ಇಟ್ಟುಕೊಂಡಿರುವ ಅಭಿಮಾನ ಅಪೂರ್ವವಾದುದು ಎಂಬುದರ ವರ್ಣನೆ ಮಾಡುತ್ತಾ

ಹಿರಿಯೋನು ತಿಮ್ಮಣ್ಣನಾಯ್ಕ ಚಿಕ್ಕೋನು ಮದಕರಿನಾಯ್ಕ
ನಡುವೋನೆ ಜಂಪಳನಾಯ್ಕ ಅವರೆಲ್ಲಿ ಗೆದ್ದಿದಾರೆ
ಅಲ್ಲೆಲ್ಲ ಕೋಟೆಗಳ ಕಟ್ಟಿಸ್ಯಾರೆ

ರಾಗಿಯ ಹಿಟ್ಟ ಚೆಲ್ಲಿ ಚೆಲ್ಲಿ ಕಟ್ಟಿಸ್ಯಾವ್ರೆ
ಸುತ್ತಾನೆ ಕೋಟೆಗಳ ಒತ್ತೊತ್ತಿ ಕಟ್ಟಿಸ್ಯಾವ್ರೆ
ಹೆಬ್ಬಿದಿರು ಬಿದರಲ್ಲ ಗುಬ್ಬಿ ನಾಟಕವಲ್ಲ
ಒಬ್ಬ ನಿಂಗಣ್ಣ ನೀನು ದೊರೆಯಲ್ಲ । ದುರುಗದ
ಹೆಬ್ಬುಲಿ ಕೂಟೆ ಸರಸಾವೆ

ಎಂದು ತಮ್ಮ ಅಭಿಮಾನವನ್ನು ಪರಿಪರಿಯಾಗಿ ತೋಡಿಕೊಳ್ಳುತ್ತಾರೆ.

೧೬. ಜನಪದ ಸಾಹಿತ್ಯದಲ್ಲಿ ದಟ್ಟವಾಗಿ ವ್ಯಾಪಿಸಿಕೊಂಡು, ನಾಡ ಹಾಡಾಗಿ ಉಳಿದವರೆಂದರೆ ಮಾಯಕೊಂಡದಲ್ಲಿ ಮಡಿದ ಹಿರೇಮದಕರಿ ನಾಯಕ ತನ್ನ ಸಾಹಸ, ಪರಾಕ್ರಮ, ಧೀರ, ನಿಲುವುಗಳ ಮೂಲಕ ನಮ್ಮ ಮನಸ್ಸನ್ನು ಸೂರೆಗೊಳ್ಳುತ್ತಾನೆ. ಮಾಯಾಕೊಂಡದ ಕಾಳಗದಲ್ಲಿ ಹೋರಾಡುತ್ತಲೇ ಮಡಿಯುವ ಅವನ ಚಿತ್ರ ನಮ್ಮ ಜನಪದರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಎಂಥ ಬಹದ್ದೂರ ನೋಡಣ್ಣ ಮೆದಕೇರಿ ಭೂಪ
ಎಂಥ ಸರದಾರ ನೋಡಣ್ಣ
ಅವನೆಂಥ ಮನಿಗಾರ ಚಿತ್ರಕಲ್ಲ ಮೆದಕೇರಿ ಭೂಪ
ಎಂಥ ಮನಿಗಾರ ನೋಡಣ್ಣ.

ಸೀರ್ಯವ ಗೆದ್ದ ಚಿನ್ನದುಂಗರ ಗೆದ್ದ

ಮಾತಿನಲಿ ಗೆದ್ದ ಮಲೆನಾಡ । ಜರ್ಮಾಲೆಯ
ರೀತೀಲಿ ಗೆದ್ದನು ದುರುಗಾವ ॥

ಈಟೀಟು ಹುಡುಗರು ಚೀಟಿ ಚಲ್ಲಣದೋರು
ಚಿಂತರ ಕಲ್ಲಾಗೆ ಹಗೆ ಯಾರು । ಮೆದಕೇರಣ್ಣಗೆ
ನಿಂತೆ ಸಲಾಮು ಕೊಡುತಾರೆ.

ಎಂದು ಹಾಡಿ ಹೊಗಳುತ್ತಾರೆ. ಒಂದು ಕಾಲಕ್ಕೆ ಚಿತ್ರದುರ್ಗ 'ಚಿಂತರಕಲ್ಲು' ಎಂದು ಕರೆಸಿಕೊಳ್ಳುತ್ತಿದ್ದ ಕುರುಹು ಇಂದಿನ ಜನಪದ ಗೀತೆಯಲ್ಲಿ ಹಾಗೇ ಉಳಿದು ಬಂದಿರುವುದನ್ನೂ ಇಲ್ಲಿ ಗಮನಿಸಬಹುದು.

ಮಲೆನಾಡಿನ ಕೆಳದಿಯ ಅರಸರೂ, ಹರಪನಹಳ್ಳಿಯ ಪಾಳೆಯಗಾರ ಸೋಮಶೇಖರ ನಾಯಕ, ರಾಯದುರ್ಗದ ಕೃಷ್ಣಪ್ಪ ನಾಯಕ, ಸವಣೂರಿನ ನವಾಬ ಹಕೀಂಖಾನರು ಒಟ್ಟಾಗಿ ಸೇರಿ ಚಿತ್ರದುರ್ಗ ಸಂಸ್ಥಾನಕ್ಕೆ ಸೇರಿದ ರಾಮಗಿರಿ ಕೋಟೆಯನ್ನು ಮುತ್ತಿದಾಗ

೧೭. ಹೆಬ್ಬುಲಿ ಬಂದ್ಯೆತೆಕೋ ಗಾದಿರಿಮಲೆ ಹೆಬ್ಬುಲಿ ಬಂದ್ಯೆತೆ
ತಬ್ಬಿಬ್ಬು ಬೀಳಬೇಡ ತಬಕಾದ ಗಾದಿರ್‍ಹೆಬ್ಬುಲಿ ಬಂದ್ಯೆತೆ

ಎಂಬಂತೆ ಹೋರಾಡಿ ಹಿರೇಮದಕರಿನಾಯಕ ಅವರ ಮುಖಭಂಗ ಮಾಡಿದ. ಅವರು ಸೇಡನ್ನು ತೀರಿಸಿಕೊಳ್ಳಲು ಮತ್ತೆ ಬಲವಾದ ಸೈನ್ಯದೊಂದಿಗೆ ಮಾಯಕೊಂಡದ ಕೋಟೆಗೆ ಸತತವಾಗಿ ಮೂರು ತಿಂಗಳು ಲಗ್ಗೆ ಹಾಕಿದರು.

ಆಗ ಯುದ್ಧಕ್ಕೆ ಹೊರಟ ಹಿರೇಮದಕರಿ, ಮನೆದೇವತೆ ಏಕನಾಥೇಶ್ವರಿಯ ವರ ಕೇಳಿದಾಗ–

ಕತ್ತೀಯ ಕಾರ್ಯವು ಕೈಗೂಡುವುದಿಲ್ಲೆಂದು
ನೆತ್ತೀಯ ಪುಷ್ಪಾವ ಕೊಟ್ಟಾಳೋ ॥ಕೋಲು॥

ನೀ ಹೋದರೆ ತಿರುಗಿ ಬರುವುದುಂಟೆ ದೊರೆಯೆ
ನಿನ್ನ ಆಯುಸವು ಇಲ್ಲಿಗೆ ಸಮನೆಂದಳು

ಆದರೂ ಹೆದರದೆ ಮುನ್ನುಗ್ಗಿದಾಗ

ತುಪ್ಪ ಸಕ್ಕರೆ ಹುಯ್ದು ಬುತ್ತಿಕಟ್ಟುವಾಗ
ಬೆಕ್ಕಡ್ಡವಾದವಲ್ಲೋ ಶಂಕರಿಶಂಖ
ಬೆಕ್ಕಡ್ಡವಾದವಲ್ಲೋ

ಈ ಅಪಶಕುನಕ್ಕೂ ಹೆದರದ ಧೀರ ಮದಕೇರಿ
ಮುಂದಕ್ಕಿಕ್ಕಿದ ಕಾಲು ಹಿಂದಿಕ್ಕಿಕ್ಕಿದರೆ
ಹೆಂಬೇಡಿ ಎನ್ನುವರೋ

ಎಂಬ ದಿಟ್ಟ ನಿರ್ಧಾರದಿಂದ ರಣಾಂಗಣಕ್ಕೆ ಹೋಗುತ್ತಾನೆ.

ಉಕ್ಕಡುವ ಬಿಡುವಾಗ ಏನೆಂದೆ ಮದಕರಿಭೂಪ
ಉಕ್ಕೀನ ಕುದುರೆ ನಡೆಮುಂದೆ । ಮಾಯಕೊಂಡದ
ಉಕ್ಕಡಕು ನಮಗು ಋಣವಿಲ್ಲ.

ಎಂಬ ವಿಷಾದದೊಂದಿಗೆ ಪ್ರಾರಂಭಿಸಿದರೂ ಅವನ ಪ್ರಯತ್ನಗಳೆಲ್ಲ ನಿಷ್ಫಲವಾಗುತ್ತವೆ. ಕೊನೆಗೆ ಹರಪನಹಳ್ಳಿಯ ಸೋಮಶೇಕರ ನಾಯಕನಿಗೂ, ಹಿರೇಮದಕರಿ ನಾಯಕನಿಗೂ ಆನೆಯ ಮೇಲೆ ನಡೆದ ಹೋರಾಟದಲ್ಲಿ

'ಸಿತ್ತೆ ಮಳೆ ಸುರಿದಂತೆ ಹತ್ತಿ ಬಂದವು ಬಾಣ
ಸೂರಿದಿಗನ ರವೆಯ ಕಾಣದೆ

– ಎಂಬ ರಣಾಂಗಣದ ಭೀಕರ ಚಿತ್ರವನ್ನು ಜನಪದಕವಿ ಕಣ್ಣಿಗೆ ಕಟ್ಟಿದಂತೆ ಕೊಡುತ್ತಾನೆ.

೧೯. ಹಿರೇಮದಕರಿನಾಯಕನು ಮಾಯಕೊಂಡ ಯುದ್ಧದಲ್ಲಿ ತೋರಿದ ಸಾಹಸ ಹಾಗೂ ಕೊನೆಗೆ ಆದ ಸೋಲಿನ ಪರಿಕರಗಳನ್ನು ಈ ರೀತಿ ವರ್ಣಿಸಿದ್ದಾರೆ.

ಬಿದ್ದನು ಮದಕರಿ ಭೂಪ ಬಿಳಿ ಅಂಗಿ ಮೇಲಾಗಿ
ವಜ್ಜರದ ಬಾಕೆ ಅಡಿಯಾಗಿ । ಮದಕೇರಿ ಭೂಪ
ಬಿದ್ದನು ಸೂರ್ಯಗೆ ಎದುರಾಗಿ

ಹಾಳಾದ ಮಾಯಿಕೊಂಡ ಹೂಡೈತೆ ರಣಗಂಬ
ಆಗಲಿಲ್ಲ ಅಡಿಗೆ ಉಣಲಿಲ್ಲ । ಮದಕೇರಣ್ಣ
ಆಗ ಬೇಗದಲಿ ಸೆರೆ ಹೋದ

ದಂಡಿನ ಸುದ್ದಿ ಹೇಳೋರಿಲ್ಲಾ
ಹಿಂದಕೆ ತಿರುಗಿ ಬಂದೋರಿಲ್ಲಾ
ಮಾಯಕೊಂಡ್ದ ಲಡಾಯಿದೊಳೆ
ಮಾಯವಾಯ್ತು ದಂಡು

ಹೀಗೆ ಮದಕರಿ ನಾಯಕನ ಕೈಮೀರಿ ಹೋಗುತ್ತಿರುವುದು ವಿಧಿವಿಲಾಸವೇ ಸರಿ. ಅದಕ್ಕೆ ಹೇಳುತ್ತಾರೆ, ಎಷ್ಟು ಮಂದಿ ಮಾರ್ಬಲವಿದ್ದರೇನು ಬಂತು?

'ಯಾಳ್ಯವು ಬಂದಾಗ ಯಾರಿಲ್ಲವಣ್ಣ
ಮೆದಕೇರಿ ಭೂಪ ಬಂದು ತಿರುಗಿ ದುರುಗ ಹೋಗಲಿಲ್ಲ.

– ಎಂದು ಜನ ಉದ್ಗಾರ ತೆಗೆಯುತ್ತಾರೆ. ಕೊನೆಗೆ ಯುದ್ಧದಲ್ಲಿ ಗಾಯಗೊಂಡ ಹಿರೇಮದಕರಿನಾಯಕ ರಣಭೂಮಿಯಲ್ಲೇ ಅಸುನೀಗುತ್ತಾನೆ.

ಮಾಯಕೊಂಡದ ಮಟ್ಟಿಯ ಮೇಲೆ
ಮಾಯವಾದನು ಮದಕರಿ ಭೂಪ

ಮಾಯಕೊಂಡದಾಗೆ ಮಾಗುಡಿ ಬಯಲಾಗೆ
ರಣಭೂಮ್ಯಾಗೇ ಸಮಾಧಿ ಮಾಡಿದರೋ
ಧೀರ ಮೆದಕರಿ ಭೂಪ ದೊರೆ ಪುರುಷ ರಾಮಣ್ಣ

ಮಲನೂರು ಮದ್ದಾನೆ ಭರ್ಮಣ್ಣ ಬರುವಾಗ
ಹುಲಿ ತನ್ನ ಗವಿಗೆ ನಡೆದೀತು

ಹೈದರಾಲಿಯ ಕುತಂತ್ರಕ್ಕೆ ಬಲಿಯಾದ ಕಟ್ಟ ಕೊನೆಯ ರಾಜಾವೀರ ಮದಕರಿನಾಯಕ ಎಂದು ಜನಪದ ಕವಿ ಧ್ವನಿಪೂರ್ಣ ಮುಕ್ತಾಯ ಮಾಡುತ್ತಾನೆ.

ಹಿರೇಮದಕರಿನಾಯಕನ ನಂತರ ಧೀರೋದಾತ್ತವಾಗಿ ಆಳಿ ಬಾಳಿದವನು (ಕಟ್ಟ ಕೊನೆಯ) ರಾಜಾವೀರ ಮದಕರಿ ನಾಯಕ.

ಕೋಲು ಕೋಲಣ್ಣ ಕೋಲೆ
ಧೂಳಿನಲಿ ಹೊರಟನು ದರುಮಾರಿ ಕೊಮಾರ
ರಣದಲ್ಲಿ ಶೂರಧೀರ ವಜ್ಜುರ

ಎಂದು ಅವನನ್ನು ವಜ್ರಕ್ಕೆ ಹೋಲಿಸುತ್ತಾ

ಚಾವಡಿಗೆ ಚಂದ್ರಾಮ ಕುಲದಲ್ಲಿ ಬೇಡಾರ ಹುಡುಗ
ತುರುಕರಿಗೆಲ್ಲ ಮದವೈರಿ । ಮೆದಕೇರಿ
ಆನೆ ಹಿಂದಕೆ ಬಾರೋ ಹನುಮಂತ ಎಂದು ವರ್ಣಿಸುತ್ತಾರೆ.

'ತೂಲಹಳ್ಳಿ ಲಡಾಯಿ', 'ಜರಿಮಲೆ ಕದನ'ಗಳಲ್ಲದೆ ಅನೇಕ ಯುದ್ಧಗಳಲ್ಲಿ ಅದ್ಭುತ ಪರಾಕ್ರಮ ಮೆರೆಯುತ್ತಾನೆ. ಹೈದರಾಲಿಯೇ ಹೆದರಿ ಹಿಮ್ಮೆಟ್ಟುವಂಥ ಸಾಹಸವನ್ನು ಪ್ರದರ್ಶನ ಮಾಡುತ್ತಾನೆ.

ಯುದ್ಧದ ಆಹ್ವಾನವನ್ನು ಜನಪದ ಕವಿ 'ಕತ್ತಿ ಕೂಗ್ಯಾವೆ ಜಗಳಾಕೆ' ಎಂದು ಪರಿಣಾಮಕಾರಿಯಾಗಿ ಚಿತ್ರಿಸುತ್ತಾನೆ.

೨೧. ಚಿತ್ರದುರ್ಗವು ಹೈದರಾಲಿಯ ವಶಕ್ಕೆ ಹೋಗುವ ಹಾಗೂ ಈ ಯುದ್ಧದಿಂದ ತನಗೆ ಸಾವು ಒದಗುವ ಮುನ್ಸೂಚನೆಯನ್ನರಿತ ಮದಕರಿ ನಾಯಕನು ಯಾವ ರೀತಿಯಲ್ಲಿ ಅಂತ್ಯವಾದನೆಂಬುದನ್ನು ವರ್ಣಿಸಿದ್ದಾರೆ.

ಅಣ್ಣ ಮೆದಕೇರಿ ಹಾಲನ್ನ ಉಣುವಾಗ
ಮಣ್ಣು ಚೆಲ್ಯಾರು ತುರುಕರು । ಮೆದಕೇರಣ್ಣ
ಹಾಲನ್ನಕೆ ನನ್ಗೆ ಋಣವಿಲ್ಲ । ತುರುಕರ
ಕತ್ತಿಗೆ ನನ್ಗೆ ಋಣವೈತೆ.

ಕಟ್ಟೆಯ ಹತ್ತೆಮ್ಮೆ ಈಯಲಾದೋ
ಹತ್ತೆಮ್ಮೆ ಮದಕರಿಗೆ ಋಣವಿಲ್ಲ । ತುರುಕರ
ಕತ್ತಿ ಬಾಯಿಗೆ ಋಣವಾದ
'ಚಿತ್ರಕಲ್ಲು ಹುಲಿಗೆ ಮೋಸ ತಿಳಿಯಾವು'
ನಿರ್ಣಾಯಕವಾದ ಈ ಯುದ್ಧದಲ್ಲಿ ಅವನು

ಹೆಂಡರನು ಕರೆಸಿದ ಮಕ್ಕಳನು ಕರೆಸಿದ
ನಿಮ್ಮ ಬುದ್ಧಿ ನಿಮ್ಮ ಕೈಯೊಳಗೇ
ಬಳೆಯನು ತಗಿಯೆಂದ ಬಣ್ಣದ ಸರ ಹರಿಯೆಂದ
ನೀಸ್ಸೆಂಧ್ವ ಮುಂಡೆ ಕೂಳುಗಳ

– ಎಂದು ಅಂತ್ಯಕರ್ಮಗಳನ್ನೂ ಮಾಡಿಸುತ್ತಾನೆ. ಅವನ ಚಂದ್ರಾಯುಧವೂ ಅವನ ಸೂಳೆಯ ಮೋಸದಿಂದ ಶತೃಗಳ ಕೈವಶವಾದಾಗ ಅವನ ಅರ್ಧಶಕ್ತಿಯೇ ಕುಂದಿಹೋಗುತ್ತದೆ ಎಂದು ಜನಪದ ಕವಿ ಕಲ್ಪನೆಯ ಮೂಲಕ ವೈಭವೀಕರಿಸುತ್ತಾನೆ.

೨೨. ಭಾರತವು ಸಾಂಪ್ರದಾಯಿಕ ನಾಡಾಗಿರುವುದರಿಂದ ಹರಕೆ ಬರುವುದು ಸಾಮಾನ್ಯವಾಗಿದೆ. ಇದೇ ರೀತಿಯಲ್ಲಿ ಮದಕರಿ ನಾಯಕನು ಹೈದರಾಲಿಗೆ ಸೆರೆಗೆ ಹೋಗುವ ಮುಂಚೆ ಇವನ ತಾಯಿ ದೇವರಲ್ಲಿ ಹರಕೆ ಹೋಗುವುದನ್ನು ವರ್ಣಿಸಿದ್ದಾರೆ.

ಬೆಳ್ಳಿ ಸತ್ತಿಗೆ ಹಸಿರು ಬಣ್ಣದ ಬೆತ್ತ
ಜಗಳೂರು ಪಾಪಯ್ಗೆ ಕಳಿವೇನು । ನನ ಮಗ
ಭಲವಂತ ಮೆದಕೇರಿ ಉಳಿದಾರೆ

ಹಿಟ್ಟಿನ ಆರತಿ ಕಟ್ಟಿನ ಬೇವಿನ ಸೀರೆ
ಉಚ್ಚಂಗಿ ಎಲ್ಲಮ್ಗೆ ಉಡಿಸೇನು । ನನ ಮಗ
ದೊರೆರಾಯ ಮೆದಕೇರಿ ಉಳಿದರೆ

ಎಂದು ಆತನ ತಾಯಿ ಹರಕೆ ಹೊರುತ್ತಾಳೆ. ಆದರೆ ಅನಿವಾರ್ಯ ಪರಿಸ್ಥಿತಿಯಲ್ಲಿ ಹೈದರನ ಸೆರೆಯಾಳಾಗಿ ಶ್ರೀರಂಗಪಟ್ಟಣದ ಸೆರೆಮನೆಗೆ ಹೋಗಬೇಕಾಗುತ್ತದೆ.

೨೩. ಅನೇಕ ಯುದ್ಧಗಳನ್ನು ಜಯಿಸಿದ ಮದಕರಿ ನಾಯಕನು ಕೊನೆಗೂ ಹೈದರಾಲಿಗೆ ಸೆರೆಹೋದ ರೀತಿಯನ್ನು ವರ್ಣಿಸಿದ್ದಾನೆ.

ಎಷ್ಟು ಮರೆಯಲಿ ಬಹದೊ ನಿನ್ನ
ಬಹಳ ಪಂಥದಲಿ ಗೆದ್ದೆಲ್ಲೋ ಪ್ರಹುಡ ರಣಧೀರ ॥ಪ॥

ಕುರುಗೋಡು ಕುಂದಿರ್ಪಿ ಆದಿವನ್ನಿನ ಕೋಟೆ
ಧೂಳ ಲಗ್ಗೆಯಲಿ ಗೆದ್ದೆಲ್ಲೋ

ಊರನು ಕಟ್ಟಿಸಿರುವ ಧೀರೆಲ್ಲಿ ಹೋದನೆ
ಕಾಮನಬಾವಿ ಕರುವರ್ತಿ ಕಟ್ಟಿಸಿರುವ
ಧೀರ ಮೆದಕೇರಿ ಸೆರೆಹೋದ

ಪಟ್ಟಣದ ಕಟ್ಟಿಸಿರುವ ಶೆಟ್ಟೆಲ್ಲಿಗ್ಹೋದನೆ
ಉಚ್ಚಂಗಿ ಹೊಂಡ ಮೇಲ್ದುರ್ಗ । ಕಟ್ಟಿಸಿರುವ
ಶೆಟ್ಟಿ ಮೆದಕೇರಿ ಸೆರೆಲೋದ

ಕಟ್ಟೆಯ ಹಿಂದಲ ಬುಟ್ಟಿ ನವಣೆತೆನೆ
ಹಾಲುಗಟ್ಟು ತಲೆ ಗಿಣಿಮುಟ್ಟಿ । ಮೆದಕೇರಣ್ಣೆ
ಹರೇವೈ ಬರದಲೆ ಶಿವ ತಲೆಹೊಯ್ದು

ಆನೆ ಬಿತ್ತು ಅಂಗಳಕೆ ಕುದ್ರೆಬಿತ್ತು ದಂಡಿನಾಗೆ
ಸಂಚಿ ಬಿತ್ತು ಕಂಚು ಹೊಳೆಯಾಗಿ । ಮೆದಕೇರಿ
ತಾನ್ ಬಿದ್ದ ಚಿತ್ರಕಲ್ಲು ಕೋಟೆಯಾಗೆ

ಕರಿಯ ಮಣ್ಣೆ ನೀನು ಯಾರ‍್ಯಾರ ಒಲಿಗೊಂಡೆ
ಗೀರು ಗಂಧದ ದೊರೆಮಗನ । ಮೆದಕೇರಣ್ಣನ
ಕರಿಯ ಮಣ್ಣೆ ಒಲಿಕೊಂಡ್ತು.

ಹೀಗೆ ಚಿತ್ರದುರ್ಗದ ಸಾರ್ವಭೌಮತೆಗೋಸ್ಕರ ಹಂಬಲಿಸುತ್ತಲೇ ಕೊನೆ ಮದಕರಿನಾಯಕನ ಬದುಕು ಕೊನೆಗೊಂಡಿತು. ಪಾಳೆಯಗಾರರ ಛಲ, ಧೀಮಂತಿಕೆ, ಮಹತ್ವಾಕಾಂಕ್ಷೆಯ ಹಂಬಲಗಳು ತಲತಲಾಂತರದಿಂದ ಜನಮನಗಳಲ್ಲಿ ಕತೆಗಳಾಗಿ ಐತಿಹ್ಯಗಳಾಗಿ ಹಾಡುಗಳಾಗಿ ಉಳಿದಿವೆ (ಮೀರಸಾಬಿಹಳ್ಳಿ ಶಿವಣ್ಣ ೧೯೯೯:೪೭–೫೪).

೨೪. ಸೂರ್ಯನು ಓಡುವ ರಥವು ಕೋಟೆ ಕೊತ್ತಲದಲ್ಲಿ
ಅಲ್ಲಿಯೇ ಕೆಚ್ಚಿ ಬಿಟ್ಟಂತೆ, ನಿಂತುಕೊಳ್ಳಲು
ಅರುಣನು ಗಾಲಿಯನ್ನು ಮುಂದೆ ನೂಕುವುದಕ್ಕೆಂದು
ಹೋಗಿ ಕೋಟೆಯ ತೆನೆಗಳನ್ನು ಎತ್ತಿ
ಸೂರ್ಯನನ್ನು ಸಾಗಿಸುವನು.

ಕನ್ನಡ ಕಾವ್ಯಗಳಲ್ಲಿ ಕೋಟೆಯ ಮಹತ್ವವನ್ನು ಕುರಿತ ಕೃತಿಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ರನ್ನ ಕವಿಯ'ಅನಂತನಾಥಪುರಾಣ' ದಲ್ಲಿ ಕೋಟೆ ಬೀಳುವ ಸ್ಥಿತಿ ಬಂದಿದೆ ಎಂದು ವಸ್ತ್ರ ಬೀಸುತ್ತ ಬೊಬ್ಬೆ ಹೊಡೆದವರಂತೆ'ಇಲ್ಲಿ ಸೋಲೊಪ್ಪಿಕೊಳ್ಳುವಾಗ ವಸ್ತ್ರ ಬೀಸುವ ಗುರುತಾಗಿರಬಹುದು. ಕೋಟೆಗಳನ್ನು ಮತ್ತು ಕೋಟೆಯ ತೆನೆಯನ್ನು ಇಲ್ಲಿ ಜನ ವರ್ಣಿಸಿದ್ದಾನೆ.

೨೫. ಪಳಕಿನ ಕೋಟೆ ಒಟ್ಟಾದನೆ ಬೇವಿನದಂಡೆ ನಭಕ್ಕೆ
ಮೀರುವ, ಟ್ಟಳೆ ನಿಮಿರ್ದೇರು ಪಾರುವಪತಾಕೆ,
ವಿರಾಜಿತಗೊಂಟು ಗೊಡಿನೊಳ್, ಒಳಸಿದಕೊತ್ತಳಂ
ಸೊಗಯಿಪಾಳ್ಯೆರಿ ಡೆಂಕಣಿ ಸಾರಾಮಾರಿಯ
ಗ್ಗಳಲಿಸುವ ಗೋಪುರಂ ಪುಲಿಮೊಗಂಮೆರುಗಂ ಪುರದೊಳ್ ನಿರಂತರ

ಹರಿಹರನ ಗಿರಿಜಾ ಕಲ್ಯಾಣದಲ್ಲಿ ಕೋಟೆಯ ವರ್ಣನೆ ಕೋಟೆಯೊಳಗೆ ಇರುವ ಅಂಗಾಂಗಗಳ ವರ್ಣನೆ ಇವು ರಕ್ಷಕರಿಂದ ಯಾವ್ಯಾವ ರೀತಿಯ ಬಳಕೆಯಾಗುತ್ತಿದ್ದವು ಎಂಬುದನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಹಳಗನ್ನಡದ ಕೋಟೆಯೇ ಹೊಸಗನ್ನಡ ಕೋಟೆ, ಪಳಕಿನ ಕೋಟೆ ಎಂದರೆ ಸ್ಫಟಿಕದ ಕೋಟೆ ಎಂಬುದು ಕವಿಯ ಕಲ್ಪನೆಯಾಗಿದೆ.

೨೬. ಹಳವಾಡ ಸಹಿತ ಬೈಚಪ್ಪ ದುರ್ಗವ ಹೊಕ್ಕು
ತಳದವರ ಬಲಿಕೆಯನು
ಬಳಸಿ ಬಳಸಿ ನೋಡಿ ದುರ್ಗ ಸೌರಣೆಯವಂ
ದಲಿಸದೆ ಮಿಗೆ ಮೂಡಿಸಿದನು
ಮುಗಿಲಟ್ಟಣೆ ನೆಲಗಮ್ಮ
ಪ್ರಗಿಸಿ ಕೂನೊಳಗಾಗಿಸಿಕೊಂಬ ಪುಲಪುಲಿ
ಮೊಗಗಳನನು ಮೂಡಿಸಿದನು.

'ಕೆಳದಿಯ ಲಿಂಗಣ್ಣ' ಕವಿಯು ಶಿವತತ್ವ ರತ್ನಾಕರದಲ್ಲಿ ಕೋಟೆಯಿಲ್ಲದ ರಾಜನನ್ನು ವಿಷರಹಿತವಾದ ಹೂವಿನಂತೆ/ಮದರಹಿತವಾದ ಆನೆಯಂತೆ ಅದನ್ನು ಸುಲಭವಾಗಿ ವಶಪಡಿಸಿ ಕೊಳ್ಳಬಹುದು ಎಂದಿದ್ದಾನೆ.

೨೭. ರಾಜರು ಒಂದು ಉತ್ತಮವಾದ ಕೋಟೆಯನ್ನೊಂದಿದರೆ ಯಾವ ರೀತಿಯ ಪರಾಕ್ರಮದಿಂದಿರುತ್ತಾನೆ ಅದೇ ಕೋಟೆಯಿಲ್ಲದವರು ಯಾವ ರೀತಿಯಲ್ಲಿ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಾರೆ ಎಂಬುದಾಗಿ ವರ್ಣಿಸಿದ್ದಾರೆ.

ವಿಷಹೀನೋ ಯಥನಾಗೋ ಮದಹೀನೋ ಯಥಾಗಜ!

ಸರ್ವೇಕ್ಷಾಂ ವಶಯತಾಂಯಾತಿ ದುರ್ಗಹೀನಸ್ಥದಾನೃಪ:!!

ನಂಜುಂಡ ಕವಿಯು'ರಾಮನಾಥ ಚರಿತೆಯಲ್ಲಿ ಕಂಪಿಲರಾಮನ ಆಸ್ಥಾನದ ದಂಡನಾಯಕನಾದ ಬೈಚಪ್ಪನು ಕೋಟೆಯನ್ನು ನಿರ್ಮಾಣ ಮಾಡಿದ ಬಗೆಯನ್ನು ಈ ಕೆಳಗಿನಂತೆ ಹೇಳಿದ್ದಾನೆ.

೨೮. ಮಸಹಸ್ತಿಗಳ ಕೈಯ ನೂಕಿ ಒಂದಿಸುವ ಪೆ

ರ್ಗದ ವಜ್ರಲಾಳ ವಿಂಡಿಗೆಯ

ಅದಟನ ದ್ವಾರಾಷ್ಟಕವಿ ವರ್ಣಿಸುವೊಡೆ ಪದಕವಿ

ಗಳಿ ಗೋಚರವು.

ಕನಕದಾಸರ ಮೋಹನ ತರಂಗಿಣಿಯಲ್ಲಿನ ಕೋಡೆಯ ಮಹತ್ವವನ್ನು ಹೇಳುವ ಒಂದು ಪದ್ಯ ಹೀಗಿದೆ.

ಮದ್ದಾನೆಯ ಸೊಂಡಿಲ ಸಹಾಯದಿಂದ ನೂಕಿ ಬಂದಿಸುವಷ್ಟು ಹಿಂದಾದ ವಜ್ರದ ಅಗುಳಿಯ ಬಾಗಿಲುಳಾ ಕೋಟೆಯನ್ನು ವರ್ಣಿಸುವುದು ಖ್ಯಾತ ಕವಿಗಳಿಗೂ ಅಸಾಧ್ಯವಾದುದು ಎಂದು ಮೋಹನ ತರಂಗಿಣಿಯ ಪದ್ಯವನ್ನು ಕೋತಿನ ಅನುಭವಿಸಿದ್ದಾರೆ.

ಅಲ್ಲದೆ ಕನಕದಾಸರು ಮೋಹನ ತರಂಗಿಣಿಯಲ್ಲಿ ಕೊಂಟೆ, ಕೊತ್ತಳ, ಹುಲಿಮೊಗ, ಕೋಟೆಯಕದ, ಮುಗಿಲಟಾಣೆ, ಕಳಸ, ಅಗಳು, ಡೆಂಕಣಿ, ಮರುಳ್‌ಗೈ, ಲಾಳಿ ಬಿಲ್ಲು, ಪೆಟಿಲು, ದಿಡ್ಡಿ, ಬಿಲದ್ವಾರ ಆಳ್ವೇರಿ ಇತ್ಯಾದಿ ಕೋಟೆ ಮತ್ತು ಅದರ ಅಂಗಾಂಗಳನ್ನು ವರ್ಣಿಸಲಾಗಿದೆ.

ಆನೆಯ ಕೈಲಿ ಅದರು ತುಳ್ಸಿದರು ದಳವಾಯಿಯವರು

ಏಳು ಸುತ್ತಿನ ಕೋಟೆ ಕಟ್ಟಿದರು

ಕ್ವಾಟೆ ಸುತ್ತ ಕಾವಲ ವಡಗಿದರು

ದಳವಾಯಿಯವರು

ರಣ್ಯನೆಲ್ಲ ಒಕ್ಕಡೆ ನಿಲ್ಸಿದರು ॥

ಒಂದು ಕೋಟೆಯನ್ನು ಕೊಳ್ಳಬೇಕೆಂದರೆ ಸ್ಥಳವು ಬಹಳ ಮುಖ್ಯವಾಗುತ್ತದೆ. ಅದು ವೀರ/ಗಂಡು ಭೂಮಿಯಾಗಿದ್ದ ರಾಜ್ಯ ಏಳಲು ಯೋಗ್ಯವಾಗಿರಬೇಕೆನ್ನುವುದು ರಾಜರ/

ಪಾಳೆಯಗಾರರ ಆಶಯವಾಗಿತ್ತು. ಸ್ಥಳದ ಆಯ್ಕೆ ಮಾಡಿದ ತರುವಯ ಅಲ್ಲಿನ ಉಬ್ಬುತಗ್ಗುಗಳನ್ನು ಸರಿಮಾಡಿ ಕೋಟೆ ಕಟ್ಟಿದರು. ಕೋಟೆಯ ಸಂರಕ್ಷಣೆಯ ದೃಷ್ಟಿಯಿಂದ ಸುತ್ತಲೂ ಸೈನ್ಯ ಪಡೆಯನ್ನು ನೇಮಕ ಮಾಡುತ್ತಿದ್ದರು. ಎಂದು ಉಲ್ಲೇಖಿಸುತ್ತದೆ.

೩೦. ಚಿತ್ರದುರ್ಗ ಕೋಟೆಯು ಯಾವ ರೀತಿಯಲ್ಲಿ ಸ್ಥಾಪಿಸಲ್ಪಟ್ಟಿತು ಹಾಗೂ ಯಾವ ರೀತಿಯ ಗಟ್ಟಿತನವನ್ನು ಹೊಂದಿತ್ತು ಎಂಬುದನ್ನು ವರ್ಣಿಸಿದ್ದಾರೆ.

ಹುಟ್ಟಿತು ಕೋಟೆ ಹುಟ್ಟಿತು ಸೀರ್ಯಾದ ಕೋಟೆ
ಅಕ್ಕಿ ಇಟ್ಟೀಲಿ ನೆಲಗಾರೆ' ಕೊಟ್ಟಾಯಿತೆ
ಸಿಕ್ಕ ಸೀರ್ಯಾದ ಕೊನೆ ಪೇಟ್ಗೆ ॥
ಕೋಟೆಯ ನಿರ್ಮಾಣ
ಮೂಡಿತು ಮೂಡಿತು ಕೋಟೆ
ಮೂಡಿತು ಸೀರ್ಯಾದ ಕೋಟೆ
ಗೋದಿ ಇಟ್ಟೀಲಿ ನೆಲಗಾರೆ! ಕೊಟ್ಟಾಯಿತೆ
ರಾಯ ಸೀರ್ಯಾದ ಕೊನೆಪೇಟ್ಗೆ॥

ಕೋಟೆಯ ನಿರ್ಮಾಣದ ಸಮಯದಲ್ಲಿ ಕೋಟೆಗೆ ಅಕ್ಕಿ, ಗೋಧಿಯ ಹಿಟ್ಟನ್ನು ಬಳಸಿ ಕಲ್ಲುಗಳ ಸಂದಿಗೆ ನಿಲುವು ಮಾಡಲಾಗಿದೆ. ಎಂಬುದನ್ನು ಹೇಳಲಾಗಿದೆ. ಕೋಟೆಯ ಜೊತೆಗೆ ಪೇಟೆಯ ನಿರ್ಮಾಣಗೊಂಡಿದ್ದನ್ನು ಇಲ್ಲಿ ಉಲ್ಲೇಖಿಸುತ್ತದೆ. ೧೬.೧೭.೧೮.ನೇ ಶತಮಾನದಲ್ಲಿ ಕೋಟೆಗಳ ನಿರ್ಮಾಣದ ಸಂದರ್ಭದಲ್ಲಿ ಕಲ್ಲಿನಿಂದ ನಿರ್ಮಿಸಿದ ಕೋಟೆಗಳಿಗೆ ಸುಣ್ಣದ ಗಾರೆಯನ್ನು ಹಾಕಿ ಕೋಟೆಯನ್ನು ಅಭೇದ್ಯಗೊಳಿಸಲಾಗುತ್ತಿತ್ತೆಂಬುದು ಇಲ್ಲಿನ ಕಥನದ ಆಶಯವಾಗಿದೆ.

ಕೋಟೆ ಕಟ್ಟಿಸಿದ ಪಾಳೆಯಗಾರರ ರಾಜರ ಹೆಸರಗಳನ್ನು ಲಿಖಿತ ಆಕರಗಳು ಉಲ್ಲೇಖಿಸುತ್ತವೆ. ಕೆಲವು ಬಾರಿ ಉಲ್ಲೇಖವಾಗದೆಯೂ ಇರುತ್ತದೆ. ಇಂಥಹ ಸಂದರ್ಭದಲ್ಲಿ ಮೌಖಿಕ ಸಾಹಿತ್ಯವು ಇತಿಹಾಸದ ಬಹುಮುಖ್ಯ ಅಂಶಗಳನ್ನು ಹೊರಚೆಲ್ಲುತ್ತವೆ. ಇದರಿಂದ ಮೌಖಿಕ ಸಾಹಿತ್ಯ ಚರಿತ್ರೆಯ ನಿರ್ಮಾಣದ ಸಂದರ್ಭದಲ್ಲಿ ಒಂದು ಆಕರವಾಗಿ ನಿಲ್ಲಬಹುದೆಂದು ಹೇಳಬಹುದಾಗಿದೆ. ಕೋಟೆ ಕಟ್ಟಿಸಿದ ಪಾಳೇಗಾರರನ್ನು ಉಲ್ಲೇಖಿಸುವ ಒಂದು ಮೌಖಿಕ ಕಥನವೊಂದು ಹೀಗಿದೆ.

೩೧. ಚಿತ್ರದುರ್ಗದ ಕೋಟೆಯನ್ನು ಕಟ್ಟಿಸುವಾಗ ಏಳು ಕಲ್ಲುಗಳನ್ನು ಬಳಸಿ ಕಟ್ಟಿದ ಕೋಟೆ. ಆದರೆ ಅದು ಅಬೇಧ್ಯವಾದ ಕೋಟೆ. ಭೂಮಿಗೂ ಆಕಾಶಕ್ಕೂ ಬೆಸೆದುಕೊಂಡಿರುವಂತೆ ಕಾಣುವ ಕೋಟೆಯಾಗಿದೆ ಎಂಬುದಾಗಿ ಮೌಖಿಕ ಕಾವ್ಯಗಳ ಮೂಲಕ ಈ ರೀತಿಯಾಗಿ ಮನಸಾರೆ ಹಾಡಿ ಹೊಗಳಿದ್ದಾರೆ.

ಚಿತ್ರದುರುಗುವ ವತ್ತಿ ಆಳುವಾಗ

ನೀನು ಒಪ್ಪೆ ಕಟ್ಟಿಸಯ್ಯ ಕೋಟೆಗಳ 'ಮದಕೇರಪ್ಪ

ನೀನು ಒಪ್ಪೆ ಕಟ್ಟಿಸಯ್ಯ ಕೋಟೆಗಳ

ಏಳೆ ಕಲ್ವೇಣಿ ಈ ಕೋಟೆ

ರಾಯ ಮದಕೇರಿ ನಾಯ್ಕನ ಬಲದಲ್ಲಿ ' ಚಿತ್ರದುರುಗ

ಏಳು ಕಲ್ಲೇಲಿ ಎದ್ದೀತು''

ಚಿತ್ರದುರುಗದ ನಾಡವತ್ತಿ ಅಳೋನಯ್ಯ

ಹೇಳಿ ಕಟ್ಟಿಸಿದ ಮದಕೇರಪ್ಪ ಅವುನು

ಏಳುಸುತ್ತಿನ ಕೋಟೆ ಒಳಗವ್ನೆ''

ಈ ಮೇಲಿನ ಕಥನದಿಂದ ಚಿತ್ರದುರ್ಗದ ಕೋಟೆಯನ್ನು ಕಟ್ಟಿಸಿದವನು ಮದಕೇರಿ ಎಂಬ ಉಲ್ಲೇಖವಿದೆ. ಈತನು ಇನ್ನೊಬ್ಬರಿಗೆ ಹೇಳಿ ಕಟ್ಟಿಸಿದವನೆಂದು ಗೊತ್ತಾಗುತ್ತದೆ. ಈ ಕೋಟೆಯ ನಿರ್ಮಾಣವು ಯಾವ ಕಾಲದಲ್ಲಿ ನಿರ್ಮಾಣವಾಯಿತು ಲಿಖಿತ ಮತ್ತು ಮೌಖಿಕ ಆಕರಗಳಿಂದ ತುಳನೆ ಮಾಡಿದರೆ ಇನ್ನಷ್ಟು ಮಾಹಿತಿ ದೊರೆಯುತ್ತದೆ (ರಾಧಾಕೃಷ್ಣಮೂರ್ತಿ ೧೯೯೦:೬).

ಗುಬ್ಬಚ್ಚಿ ಗಿಡುಗವನ್ನು ಬೆನ್ನಟ್ಟಿದಂತೆ ಬೃಹತ್ ಮತ್ತು ಸುಭದ್ರವಾದ ಕೋಟೆಯನ್ನು ಹೊಂದಿದ ರಾಜನು ಎಂತಹ ಬಲಿಷ್ಠವಾದ ಶತ್ರು ಸೈನ್ಯದಿಂದ ಪಾರಾಗಬಹುದಾಗಿದೆ. ಚಿತ್ರದುರ್ಗದ ಕೋಟೆಯು ಅಂತಹ ಉದಾಹರಣೆಗಳಲ್ಲೊಂದಾಗಿದೆ. ಇಲ್ಲಿ ಕೋಟೆಯನ್ನು ಕಟ್ಟಲು ಬೃಹತ್ತಾದ ಕಲ್ಲು ಬಂಡೆಗಳನ್ನು ಮಾತ್ರ ಬಳಸಲಾಗಿದೆ. ಮತ್ತು ಶತ್ರುಸೈನ್ಯದ ಫಿರಂಗಿ ಹೊಡೆಯಬೇಕಾದರೆ ತಗ್ಗಿಸಿ ಹೊಡೆದರೆ ಕಂದಕಕ್ಕೆ ಎತ್ತಿಹೊಡೆದರೆ ಆಕಾಶದೆತ್ತರಕ್ಕೆ ಹೋಗುತ್ತಿದ್ದಿತು. ಇಂತಹ ಕೋಟೆಯನ್ನು ನಿರ್ಮಿಸುವ ತಂತ್ರಗಾರಿಕೆಯು ಚಿತ್ರದುರ್ಗದ ಪಾಳೆಯಗಾರರಿಗೆ ಕೋಟೆಗಳ ವರ್ಣನೆಗಳ ಮೂಲಕ ಅಭಿಮಾನ ವ್ಯಕ್ತಪಡಿಸಿರುವುದನ್ನು ಕಾಣಬಹುದಾಗಿದೆ.

ಚಿತ್ರದುರ್ಗದ ಕೋಟೆಯ ಬಗ್ಗೆ ಲಿಖಿತ ಆಕರಗಳಿಗಿಂತ ಮೌಖಿಕ ಆಕರಗಳು ಬಹುಮುಖ್ಯವಾಗಿ ಇಂದಿನ ದಿನವು ಸಹ ವರ್ಣಮಯ ಭಾವದ್ರೇಕದಿಂದ ಸ್ಥಳೀಯರು ಮಾಹಿತಿಯನ್ನು ನೀಡುತ್ತಾರೆ. ಹಾಗೂ ಇತಿಹಾಸ ಸಂಶೋಧಕರಾದ ಅದರಲ್ಲಿಯು ಹೆಚ್ಚಿನದಾಗಿ ಚಿತ್ರದುರ್ಗದ ಕೋಟೆಯ ಬಗ್ಗೆಯೇ ಅಧ್ಯಯನಿಸಿದ. ರಾಜಶೇಖರಪ್ಪನವರು ಅನೇಕ ಆಧಾರಗಳನ್ನು ಸಂಗ್ರಹಿಸಿಕೊಂಡಿದ್ದು, ವಸ್ತು ಸಂಗ್ರಾಹಲಯದಂತೆ ಮಾಹಿತಿಯನ್ನು ಹೊಂದಿದ್ದಾರೆ. ಹಾಗೂ ಸಾಹಿತಿಯಾದ ವೇಣು ಬಿ.ಎಲ್. ಇವರು ಸಹ ಉತ್ತಮ ಆಧಾರಂಶಗಳನ್ನು ಕೋಟೆಯ ಬಗ್ಗೆ ಹೊಂದಿದ್ದಾರೆ. ಅದೇ ರೀತಿ ಬೆಟ್ಟದ ಎದುರಿಗೆ ಇರುವ ವಸ್ತುಸಂಗ್ರಹಾಲಯದಲ್ಲಿಯೂ ಹೆಚ್ಚಿನ

ಮಾಹಿತಿಯನ್ನು ತಿಳಿಯಲು ಸಾಧ್ಯವಾಯಿತು. ಅದು ಶಾಸನಗಳ ಮೂಲಕ ನಾಣ್ಯಗಳ ಮೂಲಕ, ಪತ್ರಗಳ ಮೂಲಕ ಆದ್ದರಿಂದ ಕೋಟೆಗೆ ಸಂಬಂಧಿಸಿದಂತೆ ಅನೇಕ ಪುಸ್ತಕಗಳನ್ನು ಸಂಗ್ರಹಿಸಿಕೊಳ್ಳಲಾಯಿತು. ಚಿತ್ರದುರ್ಗದ ಕೋಟೆಯ ನಿರ್ಮಾಣವು ಸರಿಸುಮಾರು ೩-೪ನೇ ಶತಮಾನದಲ್ಲಿ ಶಾತವಾಹನ ಆಳ್ವಿಕೆಯ ಪ್ರಾರಂಭದಲ್ಲಿಯೇ ಆಯಿತು. ಹಾಗೂ ಈ ವಿನ್ಯಾಸವು ಯುದ್ಧಕಲೆಗೆ ಅನುಗುಣವಾಗಿ ನಿರ್ಮಿಸಿರುವುದು ವಿಜಯನಗರ, ನಂತರದ ತರುವಾಯ ಆಯಿತೆಂದು ಹೇಳಬಹುದಾಗಿದೆ. ಕೋಟೆಗೆ ಸಂಬಂಧಿಸಿದಂತೆ ಗಾದೆಮಾತುಈ ರೀತಿಯಲ್ಲಿದೆ. ತಪಸ್ತದ ದಿಕ್ಕು ತಪ್ಪಿ ಹೊಕ್ಕರ ಎನ್ನುವಂತೆ ಅಂದರೆ ನೋಡಲು ಬಲು ಸುಂದರವಾಗಿರುವ ಕೋಟೆಯು ಕಾದಾಡಲು ಭಯಂಕರವಾಗಿದೆ ಎನ್ನುವ ಮಾತು ಈ ಕೋಟೆಗೆ ಹೆಚ್ಚಿನದಾಗಿ ಅನ್ವಯಿಸುತ್ತದೆ. ಇಲ್ಲಿ ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ವಿವರಿಸಿರುವ ಗಿರಿದುರ್ಗ, ವನದುರ್ಗ ಮತ್ತು ಜಲದುರ್ಗ ಎಲ್ಲಾ ಲಕ್ಷಣಗಳನ್ನು ಈ ದುರ್ಗವು ಒಳಗೊಂಡಿದೆ ಎಂಬುದು ವಿದ್ವಾಂಸರ ಅಭಿಮತವಾಗಿದೆ. ಕೋಟೆಯ ಬಗ್ಗೆ ನಾಯಕರುಗಳು ಶೌರ್ಯದ ಬಗ್ಗೆ ಹಾಗೂ ಕೋಟೆಯಲ್ಲಿ ಕಂಡುಬರುವ ರಕ್ಷಣಾ ಅವಶೇಷಗಳ ಬಗ್ಗೆ ಜಾನಪದ ಸಾಹಿತ್ಯದಲ್ಲಿ ಪದಗಳನ್ನು ಕಟ್ಟಿ ಹಾಡುವುದರ ಮೂಲಕ ರಂಜನೀಯವಾಗಿ ವರ್ಣಿಸಲಾಗಿದೆ ಹಾಗೂ ಲಿಖಿತ ಆಧಾರಗಳ ಜೊತೆಗೆ ಮೌಖಿಕ ಆಕರ ಅಥವಾ ಸಾಹಿತ್ಯವು ಒಂದು ವಿಷಯದ ಬಗ್ಗೆ ವರ್ಣಮಯವಾಗಿ ಮನಮುಟ್ಟುವಂತೆ ತಿಳಿಸಲಾಗುತ್ತದೆ. ಅವುಗಳಲ್ಲಿ ಕಥೆಗಳು, ಲಡಾಯಿ, ಲಾವಣಿ, ಜಾನಪದ, ಕೋಲುಪದ ಮುಂತಾದವುಗಳು ಈ ಒಂದು ಅಧ್ಯಯನದಲ್ಲಿ ಸಾಧರಪಡಿಸಿರುವುದನ್ನು ಕಾಣಬಹುದಾಗಿದೆ.

**ಟಿಪ್ಪಣಿಗಳು:**

೧. ಚಿತ್ರದುರ್ಗದ ಏಳುಸುತ್ತಿನ ಕೋಟೆಗೆ ಏಳು ಬಾಗಿಲುಗಳಿವೆ. ಅವು ರಂಗಯ್ಯನ ಬಾಗಿಲು, ಸಿದ್ಧಯ್ಯನ ಬಾಗಿಲು, ಉಚ್ಚಂಗಿ ಬಾಗಿಲು, ಜೋಡು ಬತೇರಿ ಬಾಗಿಲು, ಹನುಮನ ಬಾಗಿಲು, ಗಾರೆಬಾಗಿಲು, ಕಾಮನಬಾಗಿಲು. ಈ ಕಾಮನಬಾಗಿಲ ವಿಶೇಷವೆಂದರೆ ಶತ್ರುಸೇನೆಯ ಈ ಬಾಗಿಲಿನಲ್ಲಿ ಹೊಕ್ಕರೆ ಹುಲಿಯ ಬಾಯಿಗೆ ಸಿಕ್ಕಂತೆಯೇ ಸರಿ. ಇದರ ರಚನೆ ಅಂತಹ ವೈಶಿಷ್ಟ್ಯವಾಗಿದೆ. ಆದ್ದರಿಂದಲೇ ಇದಕ್ಕೆ 'ಹುಲಿಮುಖದ ಬಾಗಿಲು ಎಂದು ಕರೆಯುತ್ತಾರೆ. ಕಾಮನಬಾಗಿಲ ಬಳಿ ಒಂದು ಚೌಕಾಕಾರದ ಸುಂದರ ಹೊಂಡವಿದೆ. ಈ ಹೊಂಡದ ಮಧ್ಯೆ ಸೇದುವ ಬಾವಿ ಇದೆ. ಹಿಂದೆ ಮತ್ತು ಇಂದು ಈ ಹೊಂಡದ ನೀರನ್ನು ಬಳಸಲಾಗುತ್ತದೆ. ಕಾಮನಬಾಗಿಲ ಬಳಿ ಇರುವುದರಿಂದ ಈ ಹೊಂಡವನ್ನು ಕಾಮನಬಾವಿ ಎಂದೇ ಕರೆಯುತ್ತಾರೆ.

೨. ನಾಲ್ಕನೇ ಕೋಟೆಯ ಬಾಗಿಲಿಗೆ ವಿಷದ ಬಾಗಿಲು ಎಂದು ಕರೆಯುತ್ತಾರೆ. ಕಾರಣ ಇಲ್ಲಿ ಬಾಗಿಲಿನ ಹಿಂದೆ ಗಂಟೆಯನ್ನು ಕಟ್ಟುತ್ತಿದ್ದರು. ಶತ್ರುಗಳು ಬಾಗಿಲನ್ನು ತೆರೆದ ತಕ್ಷಣವೇ ಗಂಟೆ ಬಾರಿಸುತ್ತಿದ್ದಿತು. ಸೈನಿಕರಿಗೆ ಶತ್ರುಗಳ ದಾಳಿಯ ಬಗ್ಗೆ ತಕ್ಷಣವೇ ಮನವರಿಕೆಯಾಗುತ್ತಿದ್ದಿತು.

೩. ಚಿತ್ರದುರ್ಗದ ಕೋಟೆಯ ಬಗ್ಗೆ ಅಮೇರಿಕ ವಾರಸ್‌ಬೋಲ್ಬನ್ ಜೆಡ್.ಆರ್., ಡಾ. ಹೂವಡ್ ಎಪ್‌ಹಿಟ್‌ರವರು ಫ್ರೆಂಚದಳಪತಿ ಲಾಲಿಯವರು ಜರ್ಮನಿಯ ಡಾ. ಪಿ.ಹೆಚ್.ಪೋರ್ಕೆ ಮುಂತಾದವರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ (ಗಿರಿಜ ೧೯೯೧:೨೪).

೪. ದುರ್ಗದ ಕೋಟೆಯನ್ನು ಭದ್ರವಾಗಿ ಕಟ್ಟಿಸಿದವನು ತಿಮ್ಮಣ್ಣನಾಯಕ ಹಾಗೂ ರಾಜವೀರ ಮದಕರಿನಾಯಕನ ಕಾಲದಲ್ಲಿ ಫ್ರೆಂಚ್ ಇಂಜಿನಿಯರ್ ಸಹಾದಿಂದ ಕೋಟೆಯನ್ನು ಕಟ್ಟಲಾಯಿತು. (ಹೆಚ್ಚಿನ ವಿವರಣೆಗೆ ಗಿರಿಜ, ಚಿತ್ರದುರ್ಗದ ಜಿಲ್ಲಾ ದರ್ಶಿನಿ ೧೯೯೧:೨೩)

೫. ದೇವರ ಪ್ರಸಾರದಲ್ಲಿ ಕೂದಲು ಸಿಕ್ಕಿದ್ದು: ಪ್ರತಿನಿತ್ಯವು ದುರ್ಗದ ದೊರೆಗಳು ಪ್ರಮುಖ ದೇವಸ್ಥಾನಗಳಿಗೆ ಭೇಟಿ ನೀಡಿ ತೀರ್ಥ ಪ್ರಸಾದಗಳನ್ನು ಸ್ವೀಕರಿಸುತ್ತಿದ್ದರು. ಒಂದು ದಿನ ರಾತ್ರಿ ನಾಯಕರು ಅರಮನೆಯಿಂದ ಹೊರಡುವುದೇ ತಡವಾಯಿತು. ಇನ್ನೂ ನಾಯಕರು ದೇವಿಯ ದರ್ಶನಕ್ಕೆ ಬರುವುದಿಲ್ಲವೆಂದು ಭಾವಿಸಿದ ಪೂಜಾರಿಯು ದೇವಿಯ ತಲೆಯ ಮೇಲಿದ್ದ ಹೂವನ್ನು ತೆಗೆದುಕೊಂಡು ಸಮೀಪದಲ್ಲಿದ್ದ ತನ್ನ ಮನೆಗೆ ಹೋಗಿ ತನ್ನ ಪ್ರಿಯೆಯ ಮುಡಿಯನ್ನು ಆ ಪ್ರಸಾದದ ಹೂವಿನಿಂದ ಅಲಂಕರಿಸಿ ಸಂತೋಷಿಸುತ್ತಿರುವಾಗ ರಾಜರು ದೇವಾಲಯಗಳಿಗೆ ಬರುತ್ತಿರುವ ಸೂಚಕವಾಗಿ ಕೊಂಬು–ಕಹಳೆಗಳು ಮೊಳಗಿದವು. ಈರಣ್ಣನ ಪ್ರಿಯತಮೆಯ ತಲೆಯನ್ನೇರಿದ್ದ ಈ ಹೂವಿನ ದಂಡನ್ನೇ ಅವಸರದಲ್ಲಿ ಕಿತ್ತುಕೊಂಡು

ಮತ್ತೆ ದೇವರ ತಲೆಯ ಮೇಲೆರಿಸಿ ವಿನೀತನಾಗಿ ನಿಂತುಕೊಂಡನು. ಆ ಗಳಿಗೆಯಲ್ಲಿ ದೇವರ ಮೇಲಣ ಭಕ್ತಿಗಿಂತ ಅರಸನ ಭಯವಿದ್ದಿತು ಎಂಬುದಾಗಿದೆ. ಆಗ ನಾಯಕರು ದೇವಾಲಯದೊಳಕ್ಕೆ ಬಂದರು ಎಂದಿನಂತೆ ಮಂಗಳಾರತಿ, ತೀರ್ಥ, ಪ್ರಸಾದವನ್ನು ಸ್ವೀಕರಿಸಿದರು. ಪೂಜಾರಿ ಕೊಟ್ಟ ಹೂವಿನಲ್ಲಿ ಕೂದಲನ್ನು ಕಂಡು ನಾಯಕರು ಇದೇನು ಹಿಡಿಂಬೇಶ್ವರನಿಗೆ ಕೂದಲಿರುವುದೇ ಎಂದಾಗ ಪೂಜಾರಿ ಹೌದು ಪ್ರಭು ಎಂದನು. ಆಗ ನಾಯಕನು ಬೆಳಿಗ್ಗೆ ಬಂದು ಪರಿಶೀಲಿಸುತ್ತೇವೆ ಎಂದು ಹೊರಟಾಗ ಪೂಜಾರಿ ಈರಣ್ಣನು ದೇವರನ್ನು ಬೇಡಿದ. "ಮಾಡಿದ ತಪ್ಪನ್ನು ಕ್ಷಮಿಸು, ಅರಿಯದೇ ಆಡಿದ ಮಾತನ್ನು ಉಳಿಸು" ಎಂದನು ಬೆಳಿಗ್ಗೆ ನಾಯಕರು ಸ್ನಾನ ಮುಗಿಸಿ ನೇರವಾಗಿ ದೇವಾಲಯದ ಗರ್ಭಗುಡಿಯನ್ನು ಪ್ರವೇಶಿಸಿ ನೋಡಿದಾಗ ಹಿಡಿಂಬೇಶ್ವರನ ತಲೆಯ ಮೇಲೆ ರೇಷ್ಮೆಯಕಾರದಲ್ಲಿ ಕೂದಲುಗಳಿದ್ದವು. ಇದನ್ನು ನಂಬದ ನಾಯಕರು ಕೂದಲನ್ನು ಎಳೆದಾಗ ದೇವರ ತಲೆಯಿಂದ ರಕ್ತವೇ ಹರಿಯಿತು. ಇದರಿಂದ ನಾಯಕರು ತನ್ನ ತಪ್ಪಿಗೆ ಕ್ಷಮೆ ನೀಡು ಎಂದು ಬೇಡಿ ಹೊರಟರು. ಇದನ್ನು ಕಂಡ ಪೂಜಾರಿ ತನ್ನ ತಪ್ಪಿನಿಂದ ನಿನ್ನ ತಲೆಯಲ್ಲಿ ರಕ್ತ ಸುರಿಸಿದ್ದರಿಂದ ಇಗೋ ನನ್ನ ತಲೆಯನ್ನೇ ನಿನಗೆ ಅರ್ಪಿಸುತ್ತಿದ್ದೇನೆ ಎಂದು ತನ್ನ ತಲೆಯನ್ನೇ ಕಡಿದುಕೊಂಡನು. ಇವನ ನೆನಪಿಗಾಗಿ ನಾಯಕರು ಸ್ಮಾರಕವಾಗಿ ಸಣ್ಣ ಶಿಲೆಯಲ್ಲಿ ವಿಗ್ರಹ ಕೆತ್ತಿಸಿ ದೇವಾಲಯದ ಬಳಿ ಇಟ್ಟರು. ಇದನ್ನೇ ತಲೆಒಡಕೆ ಈರಣ್ಣನ ಕಲ್ಲು ಎಂಬುದಾಗಿ ಕರೆಯಲಾಗಿದೆ (ತೆಲಗಾವಿ, ವೆಂಕಣ್ಣಾಚಾರ್ ೧೯೭೯:೧೧೯).

೬. ಮದಕರಿನಾಯಕನಿಗೆ ದ್ರೋಹ ಬಗೆದ ಕಳ್ಳಿ ನರಸಪ್ಪಯ್ಯ: ಕೊನೆಯ ದೊರೆ ಮದಕರಿನಾಯಕನ ಪ್ರಧಾನಿಯಾಗಿದ್ದ ಕಳ್ಳಿ ನರಸಪ್ಪಯ್ಯ ದ್ರೋಹ ಬಗೆಯಲು ಇರುವ ಐತಿಹ್ಯವೆಂದರೆ ವೃದ್ಧ ಕಳ್ಳಿನರಸಪ್ಪಯ್ಯ ಯಾವಾಗಲೂ ತಾಂಬೂಲ ಮೆಲ್ಲುವ ಚಟ, ಜೊತೆಗೆ ಹೊಗೆಸೊಪ್ಪು ಇರಲೇಬೇಕು. ಕಟಬಾಯಿಂದ ತಾಂಬೂಲ ರಸ ಹರಿದು, ಅದನ್ನು ಒರಸಿಕೊಳ್ಳುತ್ತಿದ್ದ ಅಂಗವಸ್ತ್ರವೆಲ್ಲ ಕೆಂಬಣ್ಣಕ್ಕೆ ತಿರುಗಿದ್ದವು. ಈ ಅಭ್ಯಾಸವು ನಾಯಕರಿಗೆ ಅಸಹ್ಯ ತಂದಿದ್ದಿತು. ಆದರೆ ನರಸಪ್ಪನ ಮತಿ ಕುಶಾಗ್ರವಾಗಿರಲು ಈ ಹೊಗೆಸೊಪ್ಪು ಬೆರೆತ ತಾಂಬೂಲವಿರಲೇಬೇಕು ಎಂಬುದನ್ನು ರಾಜ ಮನಗಂಡಿದ್ದನು. ಒಮ್ಮೆ ಕೋಟೆಯ ಮೇಲಿನ ಬುರುಜೊಂದರ ಮೇಲೆ ರಾಜ ಪ್ರಧಾನಿ ಇಬ್ಬರೂ ನಿಂತು, ಕಂದಕದ ಆಸು–ಪಾಸಿನಲ್ಲಿ ಹೊಗೆಸೊಪ್ಪು ಬೆಳೆಸಿದ್ದಾಗ, ಸೈನಿಕರಿಗಾಗಿ ಏನೆಲ್ಲವನ್ನು ಮೇಯುತ್ತಿದ್ದ ಕತ್ತೆಗಳು ಹೊಗೆಸೊಪ್ಪಿನ ತಂಟೆಗೆ ಹೋಗುತ್ತಿರಲಿಲ್ಲ. ಇದನ್ನು ಕಂಡು ನಾಯಕರು ನೋಡಿ ಪ್ರಧಾನಿಗಳೇ ಅಲ್ಲಿ ಕತ್ತೆಗಳು ಮೈಯುತ್ತಿವೆ. ಆದರೆ ಅವು ಹೊಗೆಸೊಪ್ಪನ್ನು ತಿನ್ನುತ್ತಿಲ್ಲ (ಕತ್ತೆಯೂ ಮೇಯದೆ ಇದ್ದದ್ದನ್ನು ನೀನು ತಿನ್ನುತ್ತಿದ್ದೀಯಾ) ಎಂದು ವ್ಯಂಗ್ಯ ಮಾಡಿದನು. ಹೈದರಾಲಿಯು ಕೋಟೆಗೆ ಮುತ್ತಿಗೆ

ಹಾಕಿದ ಸಂದರ್ಭದಲ್ಲಿ ಒಳಗೊಳಗೇ ಶತ್ರುವಿನ ಕಡೆ ಸೇರಿದ ಪ್ರಧಾನಿ ದುರ್ಗಕ್ಕೆ ದ್ರೋಹ ಬಗೆದ ಹೈದರಾಲಿಯ ಕೈಸೆರೆಯಾದ ಮದಕರಿನಾಯಕನನ್ನು ಕಂಡು ಕತ್ತೆಯೂ ಮೇಯದೆ ಇದ್ದುದನ್ನು ತಿಂದ ತಲೆಯನ್ನು ನೋಡು ಎಂದು ಹೇಳಿ ಸೇಡು ತೀರಿಸಿಕೊಂಡನಂತೆ.

೭. ಕದಂಬರು ನಿರ್ಮಿಸಿದ ಅನೇಕ ಕೋಟೆಗಳು ಕರ್ನಾಟಕದಾದ್ಯಂತ ಕಂಡುಬಂದಿದೆ. ಅರಣ್ಯದಲ್ಲಿ ದೊರೆಯುವ ಮರದಿಮ್ಮಿಗಳು, ಮಣ್ಣಿನ ದಿಬ್ಬಗಳು, ಒಡ್ಡುಗಳು, ಇವುಗಳ ಮೇಲೆ ಬೆಳೆಸಿದ ಎತ್ತರವಾದ ವೃಕ್ಷಗಳು ಇವರ ರಕ್ಷಣಾ ವಾಸ್ತುಶಿಲ್ಪದ ಲಕ್ಷಣಗಳಾಗಿವೆ. ಕದಂಬರು ಹೆಚ್ಚಾಗಿ ಮೃದು ದುರ್ಗಗಳನ್ನು, ಮಣ್ಣಿನ ದುರ್ಗಗಳನ್ನು ನಿರ್ಮಿಸಿರುವುದೇ ಹೆಚ್ಚು. ಇಂತಹ ದುರ್ಗಗಳಲ್ಲಿ ಕೆಲವು ಕಾಲನ ದಾಳಿಗೆ ಸಿಕ್ಕು ನಶಿಸಿವೆ. ಮತ್ತೆ ಕೆಲವು ಕೋಟೆಗಳಲ್ಲಿ ಕಲ್ಲನ್ನು ಬಳಸಿ ಜೀರ್ಣೋದ್ಧಾರಗೊಳಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕದಂಬರು ಚಂದ್ರವಳ್ಳಿಯಲ್ಲಿ ಇಂತಹ ಮೃದು ದುರ್ಗಗಳನ್ನು ನಿರ್ಮಿಸಿದ್ದರು ಎಂಬುದನ್ನು ತಳ್ಳಿ ಹಾಕುವಲ್ಲಿ, ಕದಂಬರ ತರುವಾಯ ಕಲ್ಯಾಣಿ ಚಾಲುಕ್ಯರು ಆಳ್ವಿಕೆ ನಡೆಸಿರುವುದನ್ನು ಅವರ ಕಾಲದ ಶಾಸನಗಳು ದೃಢಪಡಿಸಿವೆ. ಚಾಲುಕ್ಯ ಕ್ರಿ.ಶ. ೧೦೭೩ರ ಶಾಸನವೊಂದು ಚಿತ್ರದುರ್ಗ ಬೆಟ್ಟದಲ್ಲಿ ಕೋಟೆ ಇದ್ದ ಬಗ್ಗೆ ಮಾಹಿತಿ ನೀಡುವ ಪ್ರಥಮ ಶಾಸನವಾಗಿದೆ. ಈ ಶಾಸನದಲ್ಲಿ ವ್ಯಕ್ತವಾಗಿರುವ ಕೋಟೆ ಪದದ ಹಿನ್ನೆಲೆಯಲ್ಲಿ ಕಲ್ಯಾಣಿ ಚಾಲುಕ್ಯರ ಕಾಲಕ್ಕಾಗಲೇ ವ್ಯವಸ್ಥಿತವಾದ ಕೋಟೆಯಿದ್ದು, ಈ ಹಿಂದೆಯೂ ಇಲ್ಲಿ ಕೋಟೆಯಿತ್ತೆಂಬುದು ಊಹಿಸಲು ಅವಕಾಶವಿದೆ. ಇವರ ನಂತರ ಹೊಯ್ಸಳರು ಚಿತ್ರದುರ್ಗ ಬೆಟ್ಟದಲ್ಲಿ ಆಳ್ವಿಕೆ ನಡೆಸಿರುವುದಕ್ಕೆ ಅವರ ಶಾಸನಗಳಿವೆ. ಕ್ರಿ.ಶ. ೧೨೬೦ರಲ್ಲಿ ಮಹಾಪ್ರಧಾನ ಹರಿಹರದ ಸಂಧಿ ವಿಗ್ರಹಿ ಸೋಮಣ್ಣನು ಪಲ್ಗುಣೇಶ್ವರ ದೇವರ ಮುಂದಣ ಮಂಟಪವನ್ನು ಮಾಡಿಸಿದನೆಂದು ಶಾಸನವೊಂದು ತಿಳಿಸುತ್ತದೆ. ಮೂರನೇ ನರಸಿಂಹನ ಪ್ರಧಾನಿಯಾಗಿ ಇಲ್ಲಿ ಆಳ್ವಿಕೆ ನಡೆಸಿದ ಮಹಾಪ್ರಧಾನ ಪೆರುಮಾಳೆ ದಂಡನಾಯಕನ ಮೂರು ಶಾಸನಗಳು ಅವನ ಧಾರ್ಮಿಕ, ಸಾಮಾಜಿಕ ಕಾರ್ಯಗಳ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ಈತನು ಬೆಟ್ಟದ ಮೇಲೆ ತನ್ನ ಹೆಸರಿನಲ್ಲಿ ಪೆರುಮಾಳೆಪುರವನ್ನು ಸ್ಥಾಪಿಸಿದನೆಂಬ ಮುಖ್ಯ ಸಂಗತಿಯನ್ನು ಶಾಸನವೊಂದು ತಿಳಿಸುತ್ತದೆ. ಪುರ ಶಬ್ಧಕ್ಕೆ ಕೋಟೆ ಎಂಬ ಅರ್ಥವಿರುವುದರಿಂದ ಬೆಟ್ಟದ ಮೇಲೆ ಹೊಯ್ಸಳರು ಕೋಟೆ-ಕೊತ್ತಲುಗಳನ್ನು ತಮ್ಮ ಅವಧಿಯಲ್ಲಿ ನಿರ್ಮಾಣ ಮಾಡಿದ್ದರೆಂದು ಹೇಳಬಹುದು. ಇಲ್ಲವೇ ಈ ಮೊದಲೇ ಇದ್ದ ಕೋಟೆಯನ್ನು ಇವರು ಬಲಪಡಿಸಿ ವಿಸ್ತರಿಸಿರಬೇಕು. ಆದರೆ ಬೆಟ್ಟದ ಮೇಲೆ ಇವರ ಅವಧಿಯಲ್ಲಿ ನಿರ್ಮಾಣಗೊಂಡಿದೆ ಎಂದು ಹೇಳಬಹುದಾದ ರಚನೆ ಕಂಡುಬರುವುದಿಲ್ಲ. ಸಾಮಾನ್ಯವಾಗಿ ಇವರ ತರುವಾಯ ಆಳ್ವಿಕೆ ಮಾಡಿದ ವಿಜಯನಗರದ ಅರಸರು, ಹೊಯ್ಸಳರು ನಿರ್ಮಿಸಿದ ಕೋಟೆಯ ಭಾಗವನ್ನು ಪುನರ್ ನಿರ್ಮಾಣ ಮಾಡಿದಂತೆ ಕೆಲವು ಕಡೆ ಕಂಡುಬರುತ್ತದೆ (ಶಿವತಾರಕ್ ೨೦೦೧:೨೫೫).

ಚಿತ್ರದುರ್ಗ ಕೋಟೆಯಲ್ಲಿ ಅನೇಕ ಕಡೆಗಳಲ್ಲಿ ವಿವಿಧ ಹೆಸರುಗಳಿಂದ ಈಶ್ವರ ನೆಲೆಗೊಂಡಿದ್ದಾನೆ. ಫಲ್ಗುಣೇಶ್ವರ, ಗಂಗಾಧರೇಶ್ವರ, ನೀಲಕಂಠ, ಚಂದ್ರಮೌಳೇಶ್ವರ, ಚನ್ನಕೇಶ್ವರ, ಕಾಶಿವಿಶ್ವೇಶ್ವರ ಹೀಗೆ ಹಲವಾರು ದೇವಾಲಯಗಳು ಚಿತ್ರದುರ್ಗದ ಕೋಟೆಯಲ್ಲಿವೆ. ಹೀಗೆ ವ್ಯಾಪಕವಾಗಿ ಕೋಟೆಗಳಲ್ಲಿ ಈತ ಸ್ಥಾಪಿತಗೊಂಡಿರುವ ಬಗ್ಗೆ ಐತಿಹ್ಯ ಹೊಂದಿದೆ. ಜೊತೆಗೆ ಕೋಟೆಯೊಳಗಿನ ಜನರು ಬೆಳಿಗ್ಗೆ ಬಾಗಿಲು ತೆಗೆದ ತಕ್ಷಣವೇ ಬಾಗಿಲ ಮುಂದೆ ಸ್ಥಾಪಿತವಾಗಿದ್ದ ನಂದಿಯ ಮುಖವನ್ನು ನೋಡುವ ಸಂಪ್ರದಾಯವಿತ್ತಂತೆ. ಅದಕ್ಕಾಗಿಯೇ "ಎದ್ದು ನಂದಿಯ ಮುಖವನ್ನು ನೋಡದವ ಹಂದಿಗಿಂತ ಕಡೆ" ಎನ್ನುವ ಗಾದೆಮಾತೇ ಪ್ರಚಲಿತದಲ್ಲಿದೆ. ಇದೇ ರೀತಿ ಕೋಟೆಯಲ್ಲಿ ಗಣಪತಿ ಹನುಮಂತ, ಸಂಪಿಗೆ ಸಿದ್ದೇಶ್ವರ ಮುಂತಾದ ಅನೇಕ ದೇವಾಲಯಗಳನ್ನು ಸ್ಥಾಪಿಸಿರುವುದು ಕಂಡುಬರುತ್ತದೆ.

ಚಿತ್ರದುರ್ಗದ ಪಾಳೆಯಗಾರರ ಕಾಲದ ದೇವಾಲಯಗಳನ್ನು ಪ್ರಮುಖವಾಗಿ ಗುಹಾ ದೇವಾಲಯಗಳು ಮತ್ತು ರಾಚನಿಕ (ಕಟ್ಟಡ) ದೇವಾಲಯಗಳೆಂದು ಗುರುತಿಸಬಹುದಾಗಿದೆ. ಇವುಗಳಲ್ಲಿ ಕೆಲವು ಮೂಲರೂಪದಲ್ಲಿದ್ದರೆ, ಇನ್ನು ಕೆಲವು ಜೀರ್ಣೋದ್ಧಾರಗೊಂಡಿದ್ದು, ಮತ್ತೆ ಕೆಲವು ಅವಸಾನದ ಅಂಚಿನಲ್ಲಿವೆ. ಇವರ ಕಾಲದ ವಾಸ್ತುಕಲೆಯ ವೈಶಿಷ್ಟತೆ ಮತ್ತು ಅವುಗಳ ಕಾಲಮಾನಗಳನ್ನು ಗುರುತಿಸಲು ಈ ಎಲ್ಲ ದೇವಾಲಯಗಳು ಸಹಾಯಕವಾಗಿವೆ. ಪಾಳೆಯಗಾರರು/ ಅರಸರು ತಮ್ಮ ಪರಿಸರದಲ್ಲಿ ಹಲವಾರು ದೇವಾಲಯ, ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಅವರ ಕಲೆ ದೇವಾಲಯಗಳ ನಿರ್ಮಾಣವನ್ನು ಶ್ರೀಮಂತಗೊಳಿಸಿದೆ. ಈ ದೇವಾಲಯಗಳನ್ನು ವಿಜಯನಗರ ವಾಸ್ತುಶೈಲಿಯ ಪ್ರಾದೇಶಿಕ ರೂಪಗಳೆಂದು ಹೇಳಬಹುದು. ಪಾಳೆಯಗಾರರ ರಾಜಕೀಯ ಮತ್ತು

ಆರ್ಥಿಕ ಇತಿಮಿತಿಗಳು ಹಾಗೂ ದೇವಾಲಯಗಳ ನಿರ್ಮಾಣದಲ್ಲಿ ಸ್ಥಳೀಯ ಶಿಲ್ಪಿಗಳ ವ್ಯಾಪಕ ಬಳಕೆ ಈ ರೂಪಾಂತರಕ್ಕೆ ಕಾರಣಗಳಾಗಿವೆ. ಆದಾಗ್ಯೂ ಕೆಲವು ದೇವಾಲಯಗಳು ತಮ್ಮ ಗಾತ್ರ ಮತ್ತು ವಿನ್ಯಾಸದಲ್ಲಿ ವಿಜಯನಗರ ಕಾಲದ ಪ್ರಬುದ್ಧ ಹಂತದ ದೇವಾಲಯಗಳಂತಿವೆ. ಒಂದೆಡೆ ಶಿಷ್ಟ ಪ್ರಕಾರದ ಶೈಲಿಯನ್ನು ಅನುಸರಿಸುತ್ತಲೇ ಮತ್ತೊಂದೆಡೆ ಸ್ಥಳೀಯ (ಜಾನಪದಿಯ) ಶೈಲಿಗೆ ಅನಿವಾರ್ಯವಾಗಿ ಒಗ್ಗಿಕೊಂಡು ಸುತ್ತಮುತ್ತಲಿನ ಬೆಟ್ಟಗುಡ್ಡಗಳಲ್ಲಿ ವಿಪುಲವಾಗಿ ದೊರೆಯುವ ಕಣಶಿಲೆ/ಗ್ರಾನೈಟ್‌ನ್ನು ಬಳಸಿದ್ದಾರೆ. ಸಾಮಾನ್ಯವಾಗಿ ದೇವಾಲಯಗಳ ಅಧಿಷ್ಠಾನ, ಭಿತ್ತಿ, ಕಂಬಗಳು, ಬಾಗಿಲುಗಳು, ಮುಚ್ಚಿಗೆ, ಪ್ರಾಕಾರ ಮಂಟಪಗಳು, ದೀಪಸ್ತಂಭ, ಉಯ್ಯಾಲೆ ಕಂಬಗಳನ್ನು ಈ ಶಿಲೆಯಿಂದಲೇ ನಿರ್ಮಿಸಲಾಗಿದೆ.

ಪ್ರಸ್ತುತ ಈ ಅಧ್ಯಯನದಲ್ಲಿ ದೇವಾಲಯಗಳು ಮತ್ತು ಬತೇರಿಗಳ ಐತಿಹ್ಯಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದ್ದು, ಚಿತ್ರದುರ್ಗದ ನಾಯಕ ಅರಸರು ಕೋಟೆಗಳನ್ನು ರಚಿಸಿಕೊಳ್ಳುವುದರ ಜೊತೆಗೆ ದೇವಾಲಯಗಳನ್ನು ಮತ್ತು ಬತೇರಿಗಳನ್ನು ನಿರ್ಮಿಸಿಕೊಂಡಿದ್ದರು. ಶೌರ್ಯ ಮತ್ತು ಸಾಹಸಕ್ಕೆ ಪ್ರತೀಕವಾಗಿ ಕೋಟೆಗಳನ್ನು ಕಟ್ಟಿದರೆ, ಭಯಭಕ್ತಿಗಾಗಿ ದೇವಾಲಯಗಳನ್ನು ನಿರ್ಮಿಸಿಕೊಳ್ಳುವುದರ ಜೊತೆಗೆ ಕೋಟೆಯ ರಕ್ಷಕವಾಗಿ ಬತೇರಿಗಳನ್ನು ನಿರ್ಮಿಸಿಕೊಂಡಿದ್ದರು. ಈ ವಿಷಯಕ್ಕೆ ಸಂಬಂಧಿಸಿದಂತೆ ಕೆಲವೊಂದು ಐತಿಹ್ಯಗಳನ್ನು ಬರವಣಿಗೆಯ ಮೂಲಕ ತಿಳಿಸಲು ಪ್ರಯತ್ನಿಸಲಾಗಿದೆ. ಹಾಗೂ ಈ ಅಧ್ಯಯನಕ್ಕೆ ಅನೇಕ ಇತಿಹಾಸ ಮತ್ತು ಸಂಶೋಧಕರುಗಳಾದ ಗಿರಿಜ ಟಿ. (೧೯೯೧), ಶೇಷಶಾಸ್ತ್ರೀ ಆರ್. (೧೯೮೨), ಶ್ರೀಕಂಠಯ್ಯ ಕೆ. (೧೯೭೫), ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ (೧೯೭೬). ಪರಮಶಿವಮೂರ್ತಿ, ರಾಜಶೇಖರಪ್ಪ ಬಿ. (೨೦೦೧), ಲಕ್ಷ್ಮಣ್ ತೆಲಗಾವಿ (೧೯೯೭), ಕರೀಗೌಡ ಬೀಚನಹಳ್ಳಿ (೨೦೦೦), ಕಲಬುರ್ಗಿ ಎಂ.ಎಂ. (೧೯೯೪), ಶ್ರೀಧರಮೂರ್ತಿ (೧೯೮೧), ವಸಂತಲಕ್ಷ್ಮೀ ಕೆ. (೨೦೦೫), ಹುಲ್ಲೂರು ಶ್ರೀನಿವಾಸ ಜೋಯಿಸ್ (೧೯೬೮), ಮಹಾಂತೇಶ ಎನ್.ಎಸ್. (೨೦೦೮), ತಿಪ್ಪಣ್ಣ ಮರಿಕುಂಟೆ (೧೯೭೯), ತಿಪ್ಪೇಸ್ವಾಮಿ ಎಂ.ಎಸ್. (೨೦೦೪), ಕೊಟ್ರೇಶ್ ಎಂ. (೨೦೦೨), ಪುಟ್ಟಣ್ಣ ಎಂ.ಎಸ್. (೧೯೭೦), ಶಕುಂತಲ ಎನ್. (೨೦೦೯), ಕೃಷ್ಣಮೂರ್ತಿ ಹನೂರು (೨೦೦೫), ಲಕ್ಷ್ಮಣ್ ತೆಲಗಾವಿ, ವೆಂಕಣ್ಣಾಚಾರ್ (೧೯೭೯), ಸೋಮಶೇಖರ್ ಎಸ್.ವೈ. (೨೦೦೦) ಮುಂತಾದವರ ಬರಹಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಇದರೊಂದಿಗೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಕ್ಷೇತ್ರಕಾರ್ಯವನ್ನು ಮಾಡಿದ ಸಂದರ್ಭದಲ್ಲಿ ದೊರಕಿದ ಮಾಹಿತಿಗಳನ್ನು ಇಲ್ಲಿ ಬಳಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಈ ಅಧ್ಯಯನದಲ್ಲಿ ದೇವಾಲಯಗಳಾದ ೧. ಬರಗೇರಮ್ಮ ದೇವಾಲಯ ೨. ಕರಿವರ್ತಿ ಈಶ್ವರ ದೇವಾಲಯ ೩. ಗಣಪತಿ ದೇವಾಲಯ ೪. ಹಿಡಿಂಬೇಶ್ವರ ದೇವಾಲಯ ಮತ್ತು

ಗಾಳಿಮಂಟಪ ೫. ಫಲ್ಗುಣೇಶ್ವರ ದೇವಾಲಯ ೬. ವೆಂಕಟರಮಣ ದೇವಾಲಯ ೭.ಗೋಪಾಲ ಸ್ವಾಮಿ ದೇವಾಲಯ ೮. ಕಾಯನಕೊಂಡ್ರದ ಸಿದ್ದಪ್ಪ ದೇವಾಲಯ ೯. ಏಕನಾಥೇಶ್ವರಿ ದೇವಾಲಯ ೧೦. ಉತ್ಸಾವಾಂಬೆ ದೇವಾಲಯ ೧೧. ಚೆನ್ನಕೇಶವ ದೇವಾಲಯ ೧೨.ಬನಶಂಕರಿ ದೇವಾಲಯ ೧೩. ಸಂಪಿಗೆ ಸಿದ್ದೇಶ್ವರ ದೇವಾಲಯ ೧೩. ಹನುಮನಗುಡಿ ಮತ್ತು ಕುಕ್ಕಡಮ್ಮನ ಗುಡಿ ೧೪. ಮುರುಘರಾಜೇಂದ್ರನ ಮಠ ೧೫. ದೀಪ ಮತ್ತು ಉಯ್ಯಾಲೆ ಸ್ತಂಭಗಳು ಹಾಗೂ ಬತೇರಿಗಳಾದ ೧. ನೆಲ್ಲಿಕಾಯಿ ಸಿದ್ದಪ್ಪನ ಬತೇರಿ ೨. ಲಾಲ್‌ಬತೇರಿ ೩. ತುಪ್ಪದಕೊಳ ಬತೇರಿ ೪. ಕಹಳೆ ಬತೇರಿ ೫. ಝುಂಡಾ ಬತೇರಿ ೬. ಬಸವನ ಬತೇರಿ ಇವುಗಳ ರಚನೆ ಮತ್ತು ಐತಿಹ್ಯಗಳನ್ನು ತಿಳಿಸಲು ಪ್ರಯತ್ನಿಸಲಾಗಿದೆ.

## ದೇವಾಲಯಗಳಿಗೆ ಸಂಬಂಧಿಸಿದ ಐತಿಹ್ಯಗಳು

ದೇವಾಲಯಗಳ ಐತಿಹ್ಯವನ್ನು ತಿಳಿಸಿಕೊಡಲು ಲಕ್ಷ್ಮಣ್ ತೆಲಗಾವಿ, ಪಾಂಡುರಂಗ ಜೋಯಿಸರ ಜೊತೆಗೂಡಿ ತಯಾರಿಸಿದ ಚಿತ್ರದುರ್ಗ ಜಿಲ್ಲಾ ದರ್ಶನ, ೧೯೮೦ ಎಂಬ ಕೃತಿ ಗಿರಿಜ ಟಿ. ಅವರ ಚಿತ್ರದುರ್ಗ ಜಿಲ್ಲಾ ದರ್ಶಿನಿ, ೧೯೯೧ ಹಾಗೂ ತಿಪ್ಪೇಸ್ವಾಮಿ ಎಂ.ಎಸ್. ಅವರ ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ, ೨೦೦೪, ಮಹಾಂತೇಶ್ ಎನ್.ಎಸ್. ಅವರ ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ (೨೦೦೮) ಎಂಬ ಬರವಣಿಗೆಗಳನ್ನು ಹೆಚ್ಚಿನದಾಗಿ ಬಳಸಿಕೊಂಡು ದೇವಾಲಯಗಳ ಐತಿಹ್ಯಗಳಿಗೆ ಸಂಬಂಧಿಸಿದ ವಿಚಾರವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

### ಬರಗೇರಮ್ಮ ದೇವಾಲಯ

ವೀರುಗಲ್ಲು ಮತ್ತು ನಾಗಕಲ್ಲುಗಳು ಚಿತ್ರದುರ್ಗ ಬೆಟ್ಟದ ಬರಗೇರಮ್ಮ ಎಂಬ ದೇವಾಲಯದ ಪಕ್ಕದಲ್ಲಿದ್ದು, ಇವು ಹೇಳುವಂತೆ ಬರಗೇರಮ್ಮ ಮತ್ತು ತಿಪ್ಪನ ಕಟ್ಟಿಮ್ಮ ಎಂಬ ಸಹೋದರಿಯಿದ್ದು, ಮಕ್ಕಳಿಲ್ಲದ ಬರಗೇರಮ್ಮ ತಂಗಿಯ ಮಕ್ಕಳನ್ನು ನೋಡಲು ಬಂದಾಗ ಬಂಜೆ ದೃಷ್ಟಿತಾಗಬಾರದು ಎಂದು ತಿಪ್ಪನ ಕಟ್ಟೆಮ್ಮ ಮಕ್ಕಳನ್ನು ಗೂಡಿನಲ್ಲಿ ಮುಚ್ಚಿಟ್ಟಳಂತೆ ಇದನ್ನು ತಿಳಿದ ಬರಗೇರಮ್ಮ ಮನನೊಂದು 'ನಿನ್ನ ಮಕ್ಕಳು ಇದ್ದಲ್ಲಿಯೇ ಕಲ್ಲಾಗಲಿ ಎಂಬುದಾಗಿ ಶಾಪ ನೀಡಿದಾಗ ಕಲ್ಲಾಗಿ ಬಿಟ್ಟವಂತೆ.' ಈಗಲೂ ಚಿಕ್ಕ ಚಿಕ್ಕ ಕಲ್ಲಿನಗುಪ್ಪೆ ಗುಡಿಯಲ್ಲಿವೆ. ಇದರಿಂದ ಮುನಿಸಿಕೊಂಡ ಅಕ್ಕ-ತಂಗಿಯರು ಮಾತಾಡುವುದನ್ನು ನಿಲ್ಲಿಸಿಬಿಟ್ಟರಂತೆ. ಇವರಿಬ್ಬರನ್ನು ಒಂದುಗೂಡಿಸಲು ಉಚ್ಚಂಗಿ ಯಲ್ಲಮ್ಮ ಒಂದು ಮಾಡಿಸಲು ಪ್ರಯತ್ನಿಸುತ್ತಾಳಂತೆ ಈ ಒಂದು ಸಂದರ್ಭವೇ ಚಿತ್ರದುರ್ಗದ ಕೋಟೆಯಲ್ಲಿ ನಡೆಯುವ ಬೇಟೆ ಉತ್ಸವವೆಂದು ಕರೆಯುತ್ತಾರೆ. ಈ ಉತ್ಸವವು ಇಂದಿಗೂ ವಿಜೃಂಭಣೆಯಿಂದ ನಡೆಯುತ್ತದೆ (ತೆಲಗಾವಿ, ವೆಂಕಣ್ಣಾಚಾರ್, ಜೋಯಿಸ್ ೧೯೮೦:೫೮ ; ಗಿರಿಜ ೧೯೯೧:೨೧-೩೬).

**ಕರಿವರ್ತಿ ಈಶ್ವರ ದೇವಾಲಯ**

ಈ ದೇವಾಲಯ ಹೊಯ್ಸಳ ಶೈಲಿಯಲ್ಲಿ ಕಟ್ಟಲ್ಪಟ್ಟು ಸುಂದರ ಭುವನೇಶ್ವರಿ ನವರಂಗಗಳಿಂದ ಕೂಡಿದ್ದು, ಇಲ್ಲಿಯ ಕಂಭಗಳ ಮೇಲೆ, ದೇವಾಲಯದ ಗೋಡೆಗಳ ಮೇಲೆ, ಗೋಪಿಕ ಸ್ತ್ರೀಯರು, ಕಾಳಿಂಗಮರ್ದನ, ನೃತ್ಯ ಗಣಪತಿ, ಮಹಿಷಾಸುರಮರ್ದಿನಿ, ನರಸಿಂಹ ಮುಂತಾದ ಕೆತ್ತನೆಗಳಿವೆ.

ಐತಿಹ್ಯ: ಬೇಸಿಗೆ ಕಾಲದಲ್ಲಿ ಪಾಳೆಯಗಾರರು ತಂಪನೆ ಕೊಳದ ಮಂಚದ ಮೇಲೆ ಮಲಗಿ ಸೆಖೆಯನ್ನು ನಿವಾರಿಸಿಕೊಂಡು ಸೂರ್ಯೋದಯಕ್ಕೆ ಮೊದಲೆದ್ದು ಶಿವಲಿಂಗ ದರ್ಶನ ಮಾಡಿಕೊಂಡು ಗುಪ್ತಮಾರ್ಗದಿಂದ ಅರಮನೆಗೆ ಹೋಗುತ್ತಿದ್ದರಂತೆ. ಈಗಲೂ ಸ್ವಲ್ಪಮಟ್ಟಿಗೆ ಗುಪ್ತಮಾರ್ಗವಿರುವುದನ್ನು ಕಾಣಬಹುದಾಗಿದೆ (ಗಿರಿಜ ೧೯೯೧:೩೧).

**ಗಣಪತಿಯ ದೇವಾಲಯ**

ಚಿತ್ರದುರ್ಗದ ಕೋಟೆಯಲ್ಲಿ ನಿರ್ಮಿಸಲಾದ ಗಣೇಶನಿಗೆ ವಿಶಿಷ್ಟವಾದ ಸ್ಥಾನವಿದ್ದು, ಗಣೇಶನನ್ನು ವಿನಾಯಕ, ಗಜಮುಖ, ವಕ್ರತುಂಡ, ಗಣಪ ಮೊದಲಾದ ಹೆಸರುಗಳಿಂದ ಕರೆಯುತ್ತಿದ್ದರು. ದಕ್ಷಿಣ ಪ್ರದೇಶಗಳಲ್ಲಿ ಬಹಳ ಹಿಂದಿನಿಂದಲೂ ಗಣಪತಿಯ ದೇವಾಲಯಗಳಿವೆ. ಇತರೆ ದೇವರಾದ ಆಂಜನೇಯನಂತೆ ಈತನೂ ಸಹ ವಿಘ್ನಗಳ ವಿನಾಯಕನಾಗಿ, ಗ್ರಾಮದೇವತೆಯಾಗಿ, ಗ್ರಾಮ ರಕ್ಷಕನಾಗಿ, ಕೋಟೆ ರಕ್ಷಕನಾಗಿ ನೆಲೆಗೊಂಡಿದ್ದಾನೆ. ಒಟ್ಟಾರೆ ತಾವು ಕೈಗೊಂಡ ಕೆಲಸದಲ್ಲಿ ಗೆಲುವನ್ನು ಬಯಸುವುದು ಗಣೇಶ ಮೂರ್ತಿಯ ಸ್ಥಾಪನೆಯ ಮುಖ್ಯ ಉದ್ದೇಶವಾಗಿದ್ದಿತು. ಹಾಗೂ ತಮ್ಮ ಇಷ್ಟಾರ್ಥಗಳ ನೆರವೇರಿಸಿ ಸಿದ್ಧಿ ಬುದ್ಧಿಯನ್ನು ಕೊಟ್ಟು ಬಂದಂತಹ ವಿಘ್ನಗಳನ್ನು ದೂರ ಮಾಡಲೆಂದು ರಾಜರು ಕೋಟೆಯೊಳಗೆ ಗಣೇಶನನ್ನು ಸ್ಥಾಪಿಸಿಕೊಂಡಿರಬಹುದು. ಆಂಜನೇಯನಂತೆ ಈತನನ್ನು ಬಯಲು ಪ್ರದೇಶಗಳಲ್ಲಿ ಸ್ಥಾಪಿಸದೆ, ಗುಡಿಗಳಲ್ಲಿ, ಬಾಗಿಲ ಮೇಲೆ, ಬಾಗಿಲೊಳಗೆ ಸ್ಥಾಪಿಸಿ ಗೌರವ ವ್ಯಕ್ತಪಡಿಸಿರುವುದು ಚಿತ್ರದುರ್ಗ ಪಾಳೆಯಗಾರರ ವಿಶೇಷವಾದ ಅಂಶವಾಗಿ ಕಂಡುಬರುತ್ತದೆ. ಚಿತ್ರದುರ್ಗದ ಕೋಟೆಯಲ್ಲಿರುವ ಏಕನಾಥೇಶ್ವರಿ ಬಾಗಿಲ ಮುಂಭಾಗ ಹುಟ್ಟು ಬಂಡೆಯೊಂದರಲ್ಲಿ ಗಣೇಶ ಮೂರ್ತಿಯನ್ನು ಕೊರೆದು ದೇವಾಲಯವನ್ನು ನಿರ್ಮಿಸಲಾಗಿದೆ. ಇದರ ಮುಂಭಾಗದಲ್ಲಿರುವ ಕಸ್ತೂರಿ ರಂಗಪ್ಪ ನಾಯಕನ ದಿಡ್ಡಿ ಬಾಗಿಲಿನ ಮೇಲೆ ಸುಂದರವಾದ ಗಣಪತಿಯನ್ನು ಸ್ಥಾಪಿಸಲಾಗಿದೆ. ಹಾಗೂ ಆನೆ ಬಾಗಿಲು ಬಾಗಿಲವಾಡದ ಮೇಲೂ ಗಣೇಶನ ಉಬ್ಬುಶಿಲ್ಪವಿದೆ. ಹೀಗೆ ಹಲವಾರು ಕಡೆ ಕೋಟೆಗಳಲ್ಲಿ ಗಣೇಶನ ಮೂರ್ತಿಯನ್ನು ಸ್ಥಾಪಿಸಿಕೊಂಡು ದೇವಾಲಯಗಳನ್ನು ಕಟ್ಟಿಸಿ ಆರಾಧಿಸುತ್ತಾ ಬರಲಾಗಿದೆ (ಕಲಬುರ್ಗಿ ೧೯೯೪:೨೮).

### ಹಿಡಿಂಬೇಶ್ವರ ದೇವಾಲಯ ಮತ್ತು ಗಾಳಿ ಮಂಟಪ

ಏಕನಾಥೇಶ್ವರಿ ದೇವಾಲಯದ ಎದುರಿಗೆ ಸ್ವಲ್ಪ ಅಂತರದಲ್ಲಿ ಇರುವಂತಹ ಮಹಾದ್ವಾರಕ್ಕೆ ಹಿಡಂಬನಾಥ ಬಾಗಿಲು/ಭೂತನಾಥ ಬಾಗಿಲೆಂದು ಕರೆಯುತ್ತಾರೆ. ೬ x ೭೫ x ೧೧ ಅಡಿಗಳಲ್ಲಿ ನಿರ್ಮಾಣವಾಗಿರುವ ಈ ಬಾಗಿಲಿನ ಬಳಿ ಹಿಡಿಂಬೇಶ್ವರ ದೇವಾಲಯವಿದ್ದು, ವಿಶಿಷ್ಟ ಶೈಲಿಯ ವಿನ್ಯಾಸವನ್ನು ಹೊಂದಿದ್ದು, ನೋಡಲು ಆಕರ್ಷಕವಾಗಿದೆ. ಹಾಗೂ ಇದರ ಹಿಂಭಾಗದಲ್ಲಿಯೇ ಸುಂದರವಾದ ಗಾಳಿ ಮಂಟಪವನ್ನು ನಿರ್ಮಿಸಲಾಗಿದ್ದು ನೋಡುಗರ ಕಣ್ಮನಗಳನ್ನು ಸೆಳೆಯುವಂತಿದೆ. ಇವು ಬೆಟ್ಟದ ಮೇಲಿರುವ ಸ್ಮಾರಕಗಳಲ್ಲಿ ಅತ್ಯಂತ ಸುಂದರವಾಗಿದ್ದು, ಇವುಗಳನ್ನು ವಿಜಯನಗರದ ಅರಸರ ಒಂದನೆಯ ದೇವರಾಯನ ಮಗ ಮಲ್ಲಣ್ಣ ಒಡೆಯನು ಕ್ರಿ.ಶ. ೧೪೧೧ರಲ್ಲಿ ನಿರ್ಮಿಸಿದನೆಂದು ಹೇಳಲಾಗಿದೆ.

### ಫಲ್ಗುಣೇಶ್ವರ ದೇವಾಲಯ

ಇಲ್ಲೊಂದು ಬೃಹತ್ ಶಿವಲಿಂಗವಿದ್ದು ಇದು ಅರ್ಜುನನಿಂದ ಪ್ರತಿಸ್ಥಾಪಿಸಲ್ಪಟ್ಟಿತ್ತೆಂಬ ಐತಿಹ್ಯವಿದೆ. ನಂತರ ಕ್ರಿ.ಶ. ೧೨೬೦ರಲ್ಲಿ ಹರಿಹರದ ಹೊಯ್ಸಳರ ಮಹಾಪ್ರಧಾನಿ ಸೋಮಣ್ಣ ದಂಡನಾಯ್ಕನು ಈ ಲಿಂಗದ ಸುತ್ತ ಮುಖ ಮಂಟಪದ ಗುಡಿ ಕಟ್ಟಿಸಿದ್ದಾನೆಂದು ಶಾಸನದಲ್ಲಿ ಉಲ್ಲೇಖವಿದೆ. ಹಾಗೂ ಈ ಶಾಸನವು ದೇವಾಲಯದ ಹೊರಭಾಗದಲ್ಲಿ ಇಡಲಾಗಿದೆ. ಇದು ಕ್ರಿ.ಶ. ೧೨೫೪-೧೨೯೨ರವರೆಗೆ ಆಳಿದ ಹೊಯ್ಸಳರ ೩ನೇ ದೊರೆ ನರಸಿಂಹನ ಕಾಲದ ಹೊಯ್ಸಳರ ಪ್ರಥಮ ಶಾಸನವಾಗಿದೆ.

### ವೆಂಕಟರಮಣ ದೇವಾಲಯ

ನಗರದ ಹೊರ ವಲಯದ ಉತ್ತರ ದಿಕ್ಕಿನಲ್ಲಿ ತುರುವನೂರು ರಸ್ತೆಯಲ್ಲಿರುವ ಈ ದೇವಾಲಯವು ಪಾಳೆಯಗಾರರ ಪ್ರಮುಖ ದೇವಾಲಯವಾಗಿದೆ. ಈ ದೇವಾಲಯದ ವಿಶೇಷತೆ ಚಿತ್ರದುರ್ಗದ ಪಾಳೆಯಗಾರರು ವಿಜಯನಗರ ಕಾಲದ ಕಲಾಶೈಲಿಯನ್ನು ಹೇಗೆ ಮುಂದುವರೆಸಿಕೊಂಡು ಬಂದರೆಂದು ತಿಳಿಸಿಕೊಡುವುದಾಗಿದೆ. ಹಾಗೂ ಗಣಪತಿಗೆ ವಿಶ್ವರೂಪ ಕೊಟ್ಟಿರುವುದು ಮತ್ತೊಂದು ವಿಶೇಷವಾಗಿದೆ. ಅಂದರೆ ರಾಮಾನುಜಚಾರ್ಯರ ಶ್ರೀ ವೈಷ್ಣವ ಪಂಥದಲ್ಲಿ ಗಣೇಶನನ್ನು ವಿಶ್ವಕೇಶವನ ರೂಪದಲ್ಲಿ ಆರಾಧಿಸಲಾಗುತ್ತದೆ. ಇವನನ್ನು ಚತುರ್ಭುಜವುಳ್ಳವನಾಗಿ ಅವುಗಳಲ್ಲಿ ಶಂಖ, ಚಕ್ರ, ಅಭಯ ಹಸ್ತಗಳನ್ನು ಚಿತ್ರಿಸಿ ವಿಷ್ಣುರೂಪವನ್ನೇ ಕೊಟಿದ್ದಾರೆ. ಈ ದೇವಾಲಯದ ಎಡಗಡೆಯ ಗೋಡೆಯ ಮೇಲೆ ಹಂಸ, ಲಕ್ಷ್ಮೀ ರಥ ಸವಾರಿ, ಆನೆ ಕಾಳಗ ಅದರ ಮೇಲೆ ಸವರಾರರು ವೀಣೆ ನುಡಿಸುತ್ತಿರುವ ನರಸಿಂಹ, ಗಜ ಸವಾರರ ಉಬ್ಬು ಶಿಲ್ಪಗಳನ್ನು ಬಿಡಿಸಲಾಗಿದೆ. ಹಾಗೂ ಕುಳಿತ ಸಿಂಹ, ಬಳ್ಳಿಯಾಕಾರ,

ಎಲೆಯಾಕಾರ, ಹೂವಿನಕಾರ, ಚಂದ್ರ, ನಗ್ನ ಸ್ತ್ರೀ ಮುಂತಾದ ಉಬ್ಬುಶಿಲ್ಪಗಳ ರಚನೆ ಕಾಣಬಹುದಾಗಿದೆ. ಈ ದೇವಾಲಯದ ಮುಂದಿರುವ ಕಟ್ಟೆಯ ಸುತ್ತಲೂ ಒಳಬದಿಯಲ್ಲಿ ಮಧ್ಯದಲ್ಲಿ ೮.೪ ಮೂಲೆಗಳಲ್ಲಿ ಒಂದೊರಂತೆ ಒಟ್ಟು ೧೨ ಕಂಬಗಳಿವೆ. ಹಾಗೂ ಇವುಗಳು ವಿಜಯನಗರ ಶೈಲಿಯ ಕಂಬಗಳಾಗಿವೆ. ದೇವಾಲಯದ ಗರ್ಭಗೃಹದ ಮೇಲೆ ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಿದ ಶಿಖರವಿದ್ದು ತುದಿ ವೃತ್ತಾಕಾರದಲ್ಲಿದೆ. ಈ ಶಿಖರಕ್ಕೆ ಇತ್ತೀಚಿಗೆ ಬಣ್ಣ ಬಳಿಯಲಾಗಿದೆ. ಇದಕ್ಕೆ ದಕ್ಷಿಣ ಬದಿಯಲ್ಲಿ ಪ್ರವೇಶದ್ವಾರವನ್ನು ಹೊಂದಿದೆ. ಈ ದೇವಾಲಯದಲ್ಲಿ ನಿರ್ಮಿಸಿದ ಗೋಪುರಗಳು ಇಸ್ಲಾಂ ಶೈಲಿಯದ್ದಾಗಿದೆ. ಇದು ಬಹುಶಃ ಟಿಪ್ಪುಸುಲ್ತಾನನ ಆಡಳಿತಾವಧಿಯಲ್ಲಿ ನಿರ್ಮಾಣಗೊಂಡಿರಬಹುದೆಂದು ಊಹಿಸಬಹುದಾಗಿದೆ. ದೇವಾಲಯದ ಮುಂದಿನ ಅಂಕಣದಲ್ಲಿ ಗರುಡನ ಚಿಕ್ಕಗುಡಿ, ಅದರ ಹಿಂದೆ ಧ್ವಜಸ್ತಂಭ, ನಂತರದಲ್ಲಿ ಬಲಿಪೀಠವಿದೆ. ಹೊರಗಡೆ ಮಧ್ಯಮ ಪ್ರಮಾಣದ ದೀಪಸ್ತಂಭವಿದೆ. ದೇವಾಲಯದ ಗರ್ಭಗೃಹದ ಮಧ್ಯಭಾಗದಲ್ಲಿ ಪೀಠದ ಮೇಲೆ ಶ್ರೀದೇವಿ-ಭೂದೇವಿ ಸಮೇತ ಕಪ್ಪುಕಲ್ಲಿನ ವೆಂಕಟೇಶ್ವರನ ವಿಗ್ರಹವಿದ್ದು ಆಕರ್ಷಕವಾಗಿದೆ. ಈ ಪೀಠದ ಮೇಲೆ ಕಮಲಾಕೃತಿಯ ರಚನೆ ಇದ್ದು, ಇದನ್ನು ಬಿಚ್ಚುಗತ್ತಿ ಭರಮಣ್ಣ ನಾಯಕನ ಕಾಲದಲ್ಲಿ ರಚನೆಗೊಂಡಿತೆಂಬುದು ಸ್ಥಳೀಯರು ನೀಡಿದ ಮಾಹಿತಿಯಾಗಿದೆ ಹಾಗೂ ಶಾಸನವು ಇದೆ (ವಸಂತಲಕ್ಷ್ಮೀ ೨೦೦೫:೯೯೧).

**ಗೋಪಾಲಸ್ವಾಮಿ ದೇವಾಲಯ**

ಚಿತ್ರದುರ್ಗ ಬೆಟ್ಟದ ಮೇಲಿನ ಗೋಪಾಲಸ್ವಾಮಿ ಹೊಂಡದ ಮೇಲ್ಭಾಗದ ದಿಬ್ಬದ ಮೇಲಿರುವ ಈ ದೇವಾಲಯವು ದ್ರಾವಿಡ ಶೈಲಿಯಲ್ಲಿದೆ. ಈ ದೇವಾಲಯವು ತನ್ನ ಕಲಾ ವೈಶಿಷ್ಟ್ಯತೆಯಿಂದ ಎಲ್ಲರ ಗಮನ ಸೆಳೆಯುವಂತಿದೆ. ಈ ದೇವಾಲಯದ ವಿಶೇಷವೆಂದರೆ ಗರ್ಭಗೃಹದ ಸುತ್ತಲೂ ಇರುವ ಪ್ರದಕ್ಷಿಣಾ ಪಥಕ್ಕೆ ಒಂದು ಬದಿಯಲ್ಲಿ ಮೆಟ್ಟಿಲುಗಳನ್ನು ಇಳಿದು ಹೋದರೆ ಮತ್ತೊಂದು ಬದಿಯಿಂದ ವಿಜಯನಗರದ ವಿಶಿಷ್ಠ ಶೈಲಿಯಾಗಿದ್ದು, ಹಂಪಿಯ ವಿಜಯವಿಠ್ಠಲ ದೇವಾಲಯದಲ್ಲಿ ಇಂತಹ ವ್ಯವಸ್ಥೆಯನ್ನು ಕಾಣಬಹುದಾಗಿದೆ. ಪ್ರದಕ್ಷಿಣ ಪಥವು ಗೋಡೆಯಿಂದಾವೃತವಾಗಿದ್ದು ಗರ್ಭಗೃಹ ಮತ್ತು ಅಂತರಾಳದ ಬಾಗಿಲ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿದ್ದು ಅವುಗಳು ಬಾಗಿಲಿನಷ್ಟೇ ಎತ್ತರವಾಗಿರುವುದು ಅಲ್ಲದೇ ದ್ವಾರಪಾಲಕರನ್ನು ಬಿಡಿಶಿಲ್ಪಗಳಂತೆ ಪ್ರಭಾವಳಿ ಹಾಗೂ ಕೀರ್ತಿ ಮುಖಗಳ ಜೊತೆ ಬಿಡಿಸಿರುವುದು ಇಲ್ಲಿಯ ವಿಶೇಷವಾಗಿದೆ. ಈ ದೇವಾಲಯದಲ್ಲಿ ೬ ಉಪಕಂಬಗಳಿರುವುದು ಮತ್ತೊಂದು ವಿಶೇಷ ಗರ್ಭಗೃಹದಲ್ಲಿ ೩೪೨ ಅಡಿ ಎತ್ತರದ ಹೊಯ್ಸಳರ ಕಾಲದ ಕಲಾಕೃತಿಯನ್ನು ಹೋಲುವ ಶ್ರೀಕೃಷ್ಣನ ಮೂರ್ತಿಯಿದೆ. ಕೊಳಲನ್ನೂದುವ ಭಂಗಿಯಲ್ಲಿರುವ ಈ ಮೂರ್ತಿಯಲ್ಲಿ ಮುರುಳಿ ನಾದವನ್ನು ಆಲಿಸುವುದರಲ್ಲಿ ಮಗ್ನರಾದ ಗೋಪಿಕ ಸ್ತ್ರೀಯರು ಮತ್ತು ಗೋವುಗಳ

ಚಿತ್ರ ಆಕರ್ಷಿಸುತ್ತವೆ. ಈ ದೇವಾಲಯವು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದರೂ ವಿಜಯನಗರ ಹಾಗೂ ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಜೀರ್ಣೋದ್ಧಾರಗೊಳ್ಳುತ್ತ ಬಂದಿದೆ. ಇದು ಗರುಡಾಂಜನೇಯ ಬಾಗಿಲ ನಂತರ ಎತ್ತರವಾದ ದಿನ್ನೆಯ ಮೇಲೆ ಕಂಡುಬರುತ್ತದೆ (ಜೋಯಿಸ್ ೧೯೬೮:೪೯ ; ಮಹಾಂತೇಶ ೨೦೦೮:೧೦-೫೨).

**ಕಾಯನಕೊಂಡ್ರದ ಸಿದ್ದಪ್ಪ ದೇವಾಲಯ**

ಚಿತ್ರದುರ್ಗಕ್ಕೆ ಮಳೆ ಬಾರದಿದ್ದರೆ ಸುತ್ತಮುತ್ತ ಗ್ರಾಮದವರು ಹರಕೆ ಹೊತ್ತು ಮನೆಯಿಂದ ಧಾನ್ಯ, ಹಣ, ಸಂಗ್ರಹಿಸಿ ಜೋಳದ ಅನ್ನ ಕಾಯಿನ ಹಾಲು ಎಡೆ ಮಾಡಿಕೊಂಡು ಸಮಾಳವಾದ್ಯ ಬಾರಿಸುತ್ತಾ ಊರ ದೇವರಗಳನ್ನು ಹೊರಡಿಸಿಕೊಂಡು ಈ ಸ್ಥಳಕ್ಕೆ ಬಂಧು ದೇವರಿಗೆ ಹರಕೆ ಸಲ್ಲಿಸಿ ಊಟ ಮಾಡಿ ಬಂದರೆ ಮಳೆಯಾಗುತ್ತದೆ ಎನ್ನುವ ನಂಬಿಕೆ ಇದೆ ಹಾಗೂ ಈ ಹಬ್ಬವನ್ನು ಪ್ರಸ್ತುತ ದಿನಗಳಲ್ಲೂ ಆಚರಿಸುತ್ತಿರುವುದನ್ನು ಕಾಣಬಹುದಾಗಿದೆ.

**ಏಕನಾಥೇಶ್ವರಿ ದೇವಾಲಯ**

ಇದು ಬೆಟ್ಟದ ತಪ್ಪಲಿನಲ್ಲಿರುವ ಈ ಗುಹಾಂತರ್ಗತ ದೇವಾಲಯವು ಚಿತ್ರದುರ್ಗ ಪಾಳೆಯಗಾರರ ಮನೆದೇವತೆಯ ಆಲಯವಾಗಿದ್ದು, ಇವರು ಯುದ್ಧಕ್ಕೆ ಹೋಗುವ ಮುನ್ನ ಈ ದೇವಿಯ ಅಪ್ಪಣೆಯನ್ನು ಪಡೆಯುತ್ತಿದ್ದರೆಂಬುದು ಜನಪದ ಸಾಹಿತ್ಯದಲ್ಲಿ ವರ್ಣಿಸಲಾಗಿದೆ. ಮೇಲ್ದುರ್ಗದಲ್ಲಿರುವ ಈ ಏಕನಾಥೇಶ್ವರಿ ದೇವಾಲಯವು ನೈಸರ್ಗಿಕ ಏಕ ಶಿಲೆಯಿಂದ ನಿರ್ಮಿತವಾಗಿದೆ. ಈ ಗವಿಗರ್ಭಗೃಹದ ಬಾಗಿಲ ಇಕ್ಕೇಲುಗಳಲ್ಲಿ ಸು. ೨ ಅಡಿ ಎತ್ತರದ ಶೈವ ದ್ವಾರಪಾಲಕರ ಶಿಲ್ಪಗಳಿದ್ದು ಲಲಾಟ ಬಿಂಬದಲ್ಲಿ ಅರಳು ಪುಷ್ಪಗಳಿವೆ. ಉಳಿದಂತೆ ದ್ವಾರವು ಸರಳವಾಗಿದ್ದು, ಇಕ್ಕೆಲುಗಳಲ್ಲಿ ಕಳಸಾಕಾರದ ಪೂರ್ಣ ಕುಂಭಗಳಿವೆ. ದ್ವಾರದ ಮುಂದೆ ಮತ್ತೊಂದು ದ್ವಾರಪಟ್ಟಿಕೆಯಿದು ಸುತ್ತಲೂ ದೀಪದ ಗೂಡುಗಳಿವೆ. ದೇವಸ್ಥಾನದ ಮಂಟಪದಲ್ಲಿ ೩ ಸಾಲಿನಲ್ಲಿ ೮ ಸ್ವತಂತ್ರ ಕಂಬಗಳು ೧೦ ಗೋಡೆ ಕಂಬಗಳಿವೆ. ಇಲ್ಲಿ ಮುಖಭಾಗದ ೪ ಕಂಬಗಳು ಮತ್ತು ಅದರ ಹಿಂದಿನ ಕಂಬಗಳು ತುಂಬಾ ಎತ್ತರವಾಗಿರುವುದು ವಿಶೇಷವಾಗಿದೆ. ಗವಿ ಗರ್ಭಗೃಹದಲ್ಲಿ ಹುಟ್ಟು ಬಂಡೆಯಲ್ಲಿ ೨ ಅಡಿ ಎತ್ತರದಷ್ಟು ದೇವಿಯ ರುಂಡವನ್ನು ಕೆತ್ತಲಾಗಿದ್ದು, ದೇಹ ಸಂಪೂರ್ಣವಾಗಿ ಹೂತು ಹೋಗಿದೆ. ಕಿರೀಟಧಾರಣಿಯಾಗಿರುವ ಈ ದೇವಿಯ ಪಕ್ಕದಲ್ಲಿ ತ್ರಿಶೂಲ, ಡಮರುವಿದೆ. ದೇವಾಲಯವನ್ನು ಚಿತ್ರದುರ್ಗದ ಮೊದಲನೆಯ ಪಾಳೆಯಗಾರನಾದ ಮತ್ತಿ ತಿಮ್ಮಪ್ಪನಾಯಕನಿಂದ ನಿರ್ಮಿಸಲ್ಪಟ್ಟಿತ್ತೆಂದು ತಿಳಿದುಬಂದಿದ್ದು ಈ ದೇವಾಲಯವು ಮೊದಲ ದಕ್ಷಿಣದ ಝುಂಡಾ ಬತೇರಿಯ ಕಡೆ ನಂತರ ಉತ್ತರಕ್ಕೆ ಕೋಟೆಯ ೭ ನೆಯ ಮಹಾದ್ವಾರದ ಕಡೆ ನಿರ್ಮಿಸಲಾಗಿದ್ದು ಪೂರ್ವದ ಕಡೆ ದೇವಿಯ ಮುಖ ಹೊಂದಿದೆ.

ಹಾಗೂ ಈ ದೇವಾಲಯವನ್ನು ನಿರ್ಮಿಸಲು ಇಟ್ಟಿಗೆ, ಗಾರೆ ಮತ್ತು ನೈಸರ್ಗಿಕ ಶಿಲೆಯನ್ನು ಬಳಸಲಾಗಿದೆ. ರಾಜಾವೀರ ಮದಕರಿನಾಯಕ ಯುದ್ಧಕ್ಕೆ ಹೋಗುವಾಗ ಎಡಬದೀಯ ಹೂ ಈ ದೇವಿಯು ನೀಡಿದ್ದರಿಂದ ರಾಜ ಮಡಿದು, ದುರ್ಗ ಹೈದರಾಲಿಯ ವಶಕ್ಕೆ ಹೋಯಿತೆಂಬ ಐತಿಹ್ಯವಿದೆ (ತಿಪ್ಪೇಸ್ವಾಮಿ ೨೦೦೪:೩೦-೭೭).

**ಉತ್ಸಾವಾಂಬೆ ದೇವಾಲಯ:**

ಚಿತ್ರದುರ್ಗ ಪಾಳೆಯಗಾರರ ಪ್ರಸಿದ್ಧ ದೇವಾಲಯ ಇದಾಗಿದ್ದು ಚಿತ್ರದುರ್ಗ ಸಂಸ್ಥಾನವನ್ನು ಆಳಿದ ಇಷ್ಟದೇವತೆ ಈ ಉಚ್ಚಂಗಿ ಎಲ್ಲಮ್ಮ ಉತ್ಸಾವಾಂಬೆಯಾಗಿದ್ದು ಇದು ಶಕವರ್ಷ ೧೪೯೦ರಿಂದ ಸು. ೨೧೧ ವರ್ಷಗಳ ಕಾಲದ ಸುದೀರ್ಘವಾಗಿ ಆಳಿದ ಪಾಳೆಗಾರರ ವಂಶದವರ ಮನೆದೇವತೆಯಾಗಿದ್ದಳು. ಈ ದೇವಾಲಯದಲ್ಲಿ ನವರಂಗ ಸಭಾಮಂಟಪವು ವಿಶಾಲವಾಗಿದ್ದು ಸುತ್ತಲೂ ೧೦ ಗೋಡೆ ಕಂಬಗಳಿವೆ. ಮಧ್ಯೆ ಬೃಹತ್ ಗಾತ್ರದ ೬ ಕಂಬಗಳು ಸಭಾಮಂಟಪದ ಛತ್ತನ್ನು ಎತ್ತಿಹಿಡಿದಿವೆ. ಹಾಗೂ ಕಂಬಗಳು ಪೀಠ, ಕಾಂಡ, ಕುಂಭ, ಕಳಸ, ಫಲಕಗಳನ್ನೊಂದಿದ್ದು, ಚಾಲುಕ್ಯರ ಶೈಲಿಯಲ್ಲಿವೆ. ಇದರ ಮುಖಮಂಟಪವು ಸಭಾಮಂಟಪಕ್ಕಿಂತ ೨ ಅಂಕಣದೊಡ್ಡದಾಗಿದ್ದು ತನ್ನ ಭವ್ಯತೆ ಮತ್ತು ಗಾತ್ರದ ಗಮನ ಸೆಳೆಯುತ್ತದೆ. ಅಂದರೆ ಇದರ ಮುಖಮಂಟಪವು ಸಭಾಮಂಟಪಕ್ಕಿಂತ ಕೆಳಮಟ್ಟದಲ್ಲಿದೆ. ಈ ದೇವಾಲಯದ ಕಂಬಗಳಲ್ಲಿ ಹಾವಾಡಿಗ, ಸಿಂಹ, ಪೂರ್ಣಕುಂಭ, ಗಂಡಭೇರುಂಡ, ವೀಣಾವಾದಕ, ಸೈನಿಕ ಭಕ್ತ, ಗರುಡ, ಗಜಸವಾರ ಕುಳಿತ ಸಿಂಹ, ನೃತ್ಯಗಾರ್ತಿ ಹಾಗೂ ವಿವಿಧ ಪುಷ್ಪಲಂಕಾರದ ಉಬ್ಬುಶಿಲ್ಪಗಳಿವೆ. ಈ ದೇವಾಲಯದ ಸುತ್ತಲೂ ಪ್ರಾಂಗಣವಿದೆ. ೨ನೆಯ ಮದಕರಿನಾಯಕನ ಕಾಲದಲ್ಲಿ ಇದು ಕೇವಲ ೨೨ ಅಂಕಣಗಳಿಲ್ಲಿದ್ದು ಭಿಚ್ಚುಗತ್ತಿ ಭರಮಣ್ಣನಾಯಕನ ಕಾಲದಲ್ಲಿ ೧೧೭ ಕಂಬಗಳ ೧೦೮ ಅಂಕಣಗಳು ನಿರ್ಮಾಣವಾದವು. ಈ ದೇವಾಲಯದ ಮುಂದೆ ಏಕಶಿಲೆಯ ದೀಪಸ್ತಂಭವಿದ್ದು ಅನತಿ ದೂರದಲ್ಲಿ ಉಯ್ಯಾಲೆ ಕಂಬವಿದೆ. ದೇವಾಲಯದ ಗರ್ಭಗೃಹದ ಮಧ್ಯದಲ್ಲಿ ಉತ್ಸಾವಾಂಬೆಯ ಮೂರ್ತಿಯಿದೆ. ಆಕೆಯ ಬಲಪಾರ್ಶ್ವದ ಗೋಡೆಯ ಪಕ್ಕದಲ್ಲಿ ಪರಶುರಾಮನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಕ್ರಿ.ಶ. ೧೬೬೫ರಲ್ಲಿ ಪೂಜಾರ ಕೆಂಚಯ್ಯ ಮತ್ತು ಚೌಡಿಕೆ ಸಿದ್ಧಯ್ಯರ ಸಹಾಯದಿಂದ ಉಚ್ಚಂಗಿ ದುರ್ಗದಿಂದ ಉತ್ಸಾವಾಂಬೆಯ ಉತ್ಸವ ಮೂರ್ತಿಯನ್ನು ತರಿಸಿ ತಾತ್ಕಾಲಿಕವಾಗಿ ಉತ್ಸಾವಾಂಬೆಯ ಮರದ ಗುಡಿಯನ್ನು ಕಟ್ಟಿ ಪ್ರತಿಷ್ಠಾಪಿಸಿದನು. ನಂತರ ಕ್ರಿ.ಶ. ೧೬೮೯ರಿಂದ ೧೭೨೧ರವರೆಗೆ ಆಳ್ವಿಕೆ ಮಾಡಿದ ಬಿಚ್ಚುಗತ್ತಿ ಭರಮಣ್ಣ ನಾಯಕ ಮತ್ತು ೧೭೨೧ರಿಂದ ೧೭೪೯ರವರೆಗೆ ಆಳಿದ ಇವನ ಮಗ ಹಿರೇಮದಕರಿ ನಾಯಕರ ಕಾಲಾವಧಿಯಲ್ಲಿ ಚಿನ್ಮೂಲಾದ್ರಿಯ ತಪ್ಪಲಿನಲ್ಲಿ ಈಗಿರುವ ಭವ್ಯವಾದ ಶಿಲಾದೇವಾಲಯವನ್ನು ನಿರ್ಮಿಸಿದರು. ಅಲ್ಲದೆ ಬಿಚ್ಚುಗತ್ತಿ ಭರಮಣ್ಣ ನಾಯಕ ತಲಾತಲಾಂತರದಿಂದ ನಡೆಯುವ ಈ ದೇವಿಯ

ಚೌಡಿಕೆ ಸೇವೆಗಾಗಿ ಚೌಡಿಕೆ ಮನೆತನದವರಿಗೆ ಒಂದು ಚೌಡಿಕೆ ಮಾಡಿಸಿಕೊಟ್ಟು ಅದರ ಮೇಲೆ ೩೩ ಸಾಲಿನ ಶಾಸನವನ್ನು ಕೆತ್ತಿಸಿದನೆಂದು ತಿಳಿದುಬಂದಿದೆ. ಈ ದೇವಾಲಯವನ್ನು ದೊಡ್ಡಪೇಟೆ ಚಿಕ್ಕಪೇಟೆಗಳು ಹಾಗೂ ಬೆಟ್ಟಕ್ಕೆ ಹೋಗುವ ಮಾರ್ಗ ಸಂಧಿಸುವ ಸ್ಥಳದಲ್ಲಿ ನಿರ್ಮಿಸಲಾಗಿದ್ದು, ಪೂರ್ವದ ಕಡೆ ಮುಖ ಮಾಡಿ ನಿರ್ಮಿಸಲಾಗಿದೆ. ಇದರ ನಿರ್ಮಾಣಕ್ಕೆ ಕಣಶಿಲೆ, ಇಟ್ಟಿಗೆ, ಗಾರೆಯನ್ನು ಉಪಯೋಗಿಸಲಾಗಿದೆ (ತೆಲಗಾವಿ, ವೆಂಕಣ್ಣಾಚಾರ್, ಜೋಯಿಸ್ ೧೯೮೦:೧೦).

### ಚೆನ್ನಕೇಶವ ದೇವಾಲಯ

ಚಿತ್ರದುರ್ಗದ ನಗರದಲ್ಲಿರುವ ಪಾಳೆಯಗಾರರ ಪ್ರಮುಖ ದೇವಾಲಯಗಳಲ್ಲಿ ಈ ದೇವಾಲಯವು ಒಂದಾಗಿದೆ. ದೇವಾಲಯದ ಗರ್ಭಗೃಹವು ೪ ಮೂಲೆಕಂಬಗಳನ್ನು ಹೊಂದಿದ್ದು ಸರಳವಾಗಿವೆ. ಇದರ ದ್ವಾರಬಾಗಿಲು ದ್ವಿಶಾಖೆಗಳಲ್ಲಿದ್ದು ಚೌಕಟ್ಟುಗಳು ಸರಳವಾಗಿವೆ. ಗರ್ಭಗೃಹಗಳ ಪ್ರವೇಶದ್ವಾರಗಳು ಅಂತರಾಳದಂತೆ ಸಭಾಮಂಟಪದಲ್ಲಿವೆ. ಅಂತರಾಳದ ದ್ವಾರಬಂಧದ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿದ್ದು, ಲಲಾಟಬಿಂಬದಲ್ಲಿ ಗಜಾನನ ಶಿಲ್ಪವಿದೆ. ಈ ದೇವಾಲಯದ ನವರಂಗಕ್ಕೆ ಹತ್ತಿ ಹೋಗಲು ೩ ಮೆಟ್ಟಿಲುಗಳಿವೆ. ದೇವಾಲಯದ ಪ್ರಾಂಗಾಣದ ಬಲಭಾಗದಲ್ಲಿ ಶ್ರೀದೇವಿ, ಭೂದೇವಿಯರ ಗುಡಿಗಳಿದ್ದು ಎದುರಿಗೆ ನವಗ್ರಹ ಕಟ್ಟೆಯಿರುವುದು ಈ ದೇವಾಲಯದ ವಿಶೇಷತೆಯಾಗಿದೆ. ಈ ದೇವಾಲಯದ ಎದುರಿಗೆ ೩೦ ಅಡಿಯ ಎತ್ತರದ ದೀಪಸ್ತಂಭವಿದ್ದು, ಹಿಂಭಾಗದಲ್ಲಿ ವಿಶಾಲವಾದ ಪುಷ್ಕಣಿಯಿದೆ. ದೇವಾಲಯದ ಗರ್ಭಗೃಹದಲ್ಲಿ ಪಂಚಲೋಹದ ಚೆನ್ನಕೇಶವ ವಿಗ್ರಹವಿದೆ. ಇದು ತುಂಬಾ ಆಕರ್ಷಕವಾಗಿದೆ. ಅಂತರಾಳದ ಬಲಭಾಗದ ಉಪಗರ್ಭಗೃಹದಲ್ಲಿ ಈಶ್ವರ ಎಡಭಾಗದ ಗರ್ಭಗೃಹದಲ್ಲಿ ಆಂಜನೇಯನ ಶಿಲ್ಪಗಳಿವೆ. ಈ ದೇವಾಲಯವನ್ನು ವೀಕ್ಷಿಸಿದಾಗ ಬಹುಶಃ ಚಿತ್ರದುರ್ಗದ ಕೊನೆಯ ಪಾಳೆಯಗಾರ ರಾಜವೀರ ಮದಕರಿನಾಯಕನ ಕಾಲದಲ್ಲಿ ನಿರ್ಮಿಸಲ್ಪಟ್ಟಿದೆ ಎಂಬುದು ದೇವಾಲಯವಿರುವ ಲಕ್ಷಣವನ್ನು ವೀಕ್ಷಿಸಿದಾಗ ತಿಳಿದುಬರುತ್ತದೆ. ಅಲ್ಲದೆ ಇವನ ಬಳಿ ಸೇವೆಯಲ್ಲಿದ್ದು ಫೌಜ್‌ದಾರ ಗೋವಿಂದರಾಯ ಕ್ರಿ.ಶ. ೧೮೦೮ರಲ್ಲಿ ಈ ದೇವಾಲಯವನ್ನು ಪೂರ್ಣಗೊಳಿಸಿದನೆಂದು ತಿಳಿದುಬರುತ್ತದೆ. ಹಾಗಾಗಿ ರಾಜವೀರ ಮದಕರಿ ನಾಯಕನ ಕಾಲದಲ್ಲಿ ಈ ದೇವಾಲಯವು ಅಪೂರ್ಣವಾಗಿದ್ದಿತ್ತೆಂದು ಸ್ಥಳೀಯರ ಹೇಳಿಕೆಯಿಂದ ತಿಳಿಯಬಹುದಾಗಿದೆ. ಈ ದೇವಾಲಯವಿರುವುದು ಚಿತ್ರದುರ್ಗದ ಪೂರ್ವ ದಿಕ್ಕಿನಲ್ಲಿರುವ ಚನ್ನಕೇಶವಪುರ ಬಡಾವಣೆ/ಗೇಸಾಯಿ ಮಠದ ಆಗ್ನೇಯ ದಿಕ್ಕಿನ ಕೆರೆಯ ಅಂಗಳದಲ್ಲಿ ಕಂಡುಬರುತ್ತದೆ (ಶ್ರೀಧರಮೂರ್ತಿ ೧೯೮೧:೭೩).

### ಬನಶಂಕರಿ ದೇವಾಲಯ

ಬೆಟ್ಟದ ಮೇಲೆ ಬೀಸುವ ಕಲ್ಲನ್ನು ನೋಡಲು ಹೋಗುವ ದಾರಿಯಲ್ಲಿ ಬಲಗಡೆ ಹುಟ್ಟು ಬಂಡೆಯ ನೆಲ ಗವಿಯಲ್ಲಿ ಈ ದೇವಿಯು ಅಂಗಹೀನವಾಗಿ ಸರ್ವಾಲಂಕಾರ ಭೂಷಿತಳಾಗಿ

ಪದಸೀನಳಾಗಿದ್ದಾಳೆ. ಬಹುಶಃ ಕೋಟೆ ಕಟ್ಟುವುದಕ್ಕೆ ಮೊದಲೇ ವನದ ಮಧ್ಯೆ ದೇವಿ ನೆಲೆಸಿರಬೇಕು. ಇಲ್ಲಿ ಅನೇಕ ನಾಗರ ಕಲ್ಲುಗಳಿವೆ. ವೀರಗಚ್ಚೆ ಬಿಗಿದ ವೀರ ಮುಡಿಕಟ್ಟು, ಕತ್ತಿಬಿಲ್ಲು ಬಾಣ ಹಿಡಿದ ಹೆಣ್ಣು ವಿಗ್ರಹ ಮುಂತಾದವುಗಳನ್ನು ಈ ಗುಡಿಯ ಸುತ್ತಮುತ್ತಲು ನೋಡಬಹುದಾಗಿದೆ.

**ಸಂಪಿಗೆ ಸಿದ್ದೇಶ್ವರ ದೇವಾಲಯ**

ಚಿತ್ರದುರ್ಗದ ಮೇಲುದುರ್ಗದಲ್ಲಿ ಈ ದೇವಾಲಯವಿದೆ. ದೇವಾಲಯದ ಸುತ್ತಲೂ ಕೆಂಡಸಂಪಿಗೆಯ ಸುವಾಸನೆಯ ಗಿಡಮರಗಳಿಂದ ಕೂಡಿದ್ದು ಪಾಳೆಯಗಾರರ ಕಾಲದಲ್ಲಿ ಈ ಗುಡಿಗೆ ಸಿದ್ದೇಶ್ವರ ಗುಡಿ ಎಂದು ಹೆಸರು ಬಂದಿತು.

ತುಪ್ಪದಕೊಳದಬತೇರಿ ಗುಡ್ಡದ ತಪ್ಪಲಲ್ಲಿ ಇದೊಂದು ಪುರಾತನ ಗುಹಾಂತರ ದೇವಾಲಯವಿದೆ. ಈ ದೇವಾಲಯದ ಗುಡ್ಡಕ್ಕೆ ಮುಕ್ತಿ ಶಿವಾಲಯ ಶಿಬಿರ ಎನ್ನುತ್ತಾರೆ. ದೇವಾಲಯವು ಏಕಶಿಲಾ ಗುಹೆಯಾಗಿದ್ದು ಉತ್ತರದಲ್ಲಿ ಕಲ್ಲುಗೋಡೆ ಮುಖಮಂಟಪಗಳಿಂದ ಕೂಡಿದೆ. ಗರ್ಭಗುಡಿಯಲ್ಲಿ ಅನಾದಿ ಸಿದ್ಧನಾಥ ಲಿಂಗವಿದೆ. ಹಿಂದೆ ಈ ಗುಡಿಯ ಗುಹೆಗಳಲ್ಲಿ ರಸಾಸಿದ್ಧರು ವಾಸಿಸುತ್ತಿದ್ದು ಈ ಶಿವಲಿಂಗವನ್ನು ಪೂಜಿಸುತ್ತಿದ್ದರಿಂದ ಸಿದ್ಧಲಿಂಗೇಶ್ವರ ಎಂದು ಹೆಸರಾಗಿದೆ. ಪಂಚಚಾರ್ಯ ಗುರುಗಳಾದ ಶ್ರೀ ರೇವಣಸಿದ್ಧರು ಇಲ್ಲಿ ನೆಲೆಸಿದ್ದಾಗಿಯೂ, ಈ ರೇವಣಸಿದ್ಧರು ರಸಾಸಿದ್ಧರೊಂದಿಗೆ ನೆಲಸಿದ್ದಾಗ ಮರುಳಸಿದ್ದರು ಇವರ ದರ್ಶನ ಪಡೆದಿದ್ದರೆಂದು ಪ್ರತೀತಿ ಇದೆ. ಈ ಸಿದ್ದೇಶ್ವರ ಲಿಂಗದ ಹಿಂದೆ ಕತ್ತಲೆಯಿಂದ ಕೂಡಿದ ೪ ಕೋಣೆಗಳ ಗುಹೆ ಇದೆ. ಹಾಗೂ ಇಲ್ಲಿ ಅಲ್ಲಮಪ್ರಭುವಿನ ವಿಗ್ರಹವಿದೆ. ದೇವಾಲಯದ ಅಂಗಳದಲ್ಲಿಯೇ ಪಾಳೆಯಗಾರರ ಪಟ್ಟಮಹೋತ್ಸವ ನಡೆಯುತ್ತಿದ್ದಿತು. ಹೋಮ ಕುಂಡದ ಹತ್ತಿರ ಗವಿ ಇದೆ. ದೇವಾಲಯದ ಮುಂಭಾಗದ ನವಿಲು ಉಯ್ಯಾಲೆಗಳಿದ್ದು, ಪಾಳೆಯಗಾರರ ಕಾಲದಲ್ಲಿ ಈ ಉಯ್ಯಾಲೆಗಳಿಗೆ ಚಿನ್ನದ ಸರಪಳಿಗಳನ್ನು ಹಾಕಿ ಸಿದ್ಧೇಶ್ವರನನ್ನು ಕೂರಿಸಿ ತೂಗಿ ವಿಜೃಂಬಣೆಯಿಂದ ಉತ್ಸವ ಆಚರಿಸುತ್ತಿದ್ದರಂತೆ. ದೇವಾಲಯದ ಹೊರಭಾಗದಲ್ಲಿ ಅನೇಕ ಶಿಲಾಶಾಸನಗಳಿವೆ. ಗುಡಿಯ ಆಗ್ನೇಯ ದಿಕ್ಕಿನಲ್ಲಿ ವಿಜಯನಗರದ ದೊರೆತ ಶಾಸನಗಳಿಂದ ವಿಜಯನಗರದ ವೀರಬಲ್ಲಾಳನ ಮಹಾಮಂಡಳೇಶ್ವರ ಮಲ್ಲಿನಾಥ ಒಡೆಯರು ಬೆಮ್ಮತ್ತದುರ್ಗದಲ್ಲಿ ಆಳುತ್ತಿದ್ದ ಕ್ರಿ.ಶ. ೧೩೫೫ರಲ್ಲಿ ಸಿದ್ಧನಾಥ ದೇವರಿಗೆ ಕಲ್ಲು ಉಪ್ಪರಿಗೆಯನ್ನು ಕಟ್ಟಿಸಿ ಶಿಖರ ಪ್ರತಿಷ್ಠೆ ಮಾಡಿ, ಉಯ್ಯಾಲೆ ಕಂಬವನ್ನು ನಿಲ್ಲಿಸಿ, ದೇವರ ಪೂಜಾಕಾರ್ಯಗಳಿಗೆ ಚಿಕ್ಕಪುರ, ಮುಸ್ಸಂಡಿಹಾಳು ಗ್ರಾಮವನ್ನು ದತ್ತಿ ನೀಡಿದ ಉಲ್ಲೇಖವಿದೆ. ಹಾಗೂ ಇಲ್ಲಿ ದೊರೆತ ಶಾಸನಗಳಿಂದ ಹೊಯ್ಸಳರು ವಿಜಯನಗರದವರು ಸಿದ್ಧನಾಥ ದೇವರಿಗೆ ದಾನದತ್ತಿ ನೀಡಿ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದನೆಂದು ತಿಳಿದುಬರುತ್ತದೆ (ಮಹಾಂತೇಶ ೨೦೦೮:೫೩, ಗಿರಿಜ ೧೯೯೧:೫೯).

## ಹನುಮನ ಗುಡಿ ಮತ್ತು ಕುಕ್ಕಡದಮ್ಮನ ಗುಡಿ

ಈ ಹಿಂದೆ ಒನಕೆ ಓಬವ್ವನ ಸಾಹಸಕ್ಕೆ ಮೆಚ್ಚಿ ರಾಜಾವೀರ ಮದಕರಿನಾಯಕನು ಆಕೆಯ ನೆನಪಿಗಾಗಿ ೧೭೬೯ರಲ್ಲಿ ಹೊರಸುತ್ತಿನ ಕೋಟೆಬಾಗಿಲು ಕಟ್ಟಿಸಿ ಒನಕೆ ಬಾಗಿಲೆಂದು ಹೆಸರಿಟ್ಟನಂತೆ, ಆದರೆ ಬಾಗಿಲಿನ ಒಳಭಾಗದಲ್ಲಿ ಚಿಕ್ಕ ಆಂಜನೇಯನ ಗುಡಿಯನ್ನು ಕಟ್ಟಿಸಿದ್ದರಿಂದ ಈ ಬಾಗಿಲಿಗೆ ಹನುಮನ ಬಾಗಿಲೆಂದು ಕರೆಯುತ್ತಿದ್ದಾರೆ.

ಚಿತ್ರದುರ್ಗ ಬೆಟ್ಟದ ಸುತ್ತಮುತ್ತ ವಾಸಿಸುವ ಜನರು ಮಕ್ಕಳಿಗೆ ಕೆಮ್ಮು ಬಂದರೆ, ದನಕರುಗಳಿಗೆ ಕಾಯಿಲೆಯಾದರೆ ಹರಕೆ ಮಾಡಿಕೊಳ್ಳುತ್ತಾರೆ. ಇಲ್ಲಿ ಒಂದು ಬಿಡಾರ ಹೂಡಿ ಎಡೆ/ಬಲಿಪೂಜೆ ಮಾಡುತ್ತಾರೆ. ಹಾಗೂ ಇಲ್ಲಿಯ ವಿಶೇಷವೆಂದರೆ ಬಲಿಕೊಟ್ಟ ಪ್ರಾಣಿಯ ಯಾವುದಾದರೂ ಅಂಗವನ್ನು ಗುಡಿಯ ಮುಂದಿರುವ ಆಲದ ಮರಕ್ಕೆ ಕಟ್ಟುತ್ತಾರೆ. ಇಲ್ಲಿ ಒಂದು ಹುತ್ತ ಬೆಳೆದಿದೆ. ಇದಕ್ಕೂ ಪೂಜೆ ಸಲ್ಲಿಸುತ್ತಾರೆ. ರಾತ್ರಿ ಇಲ್ಲಿ ತಂಗಬೇಕಾದರೆ ಗಾಡಿಯಲ್ಲಿಯೇ ಮಲಗುತ್ತಾರೆ. ಹೀಗೆ ಮಲಗುವುದರಿಂದ ಭೂತ–ಪ್ರೇತಗಳ ಭೀತಿ ಇರುವುದಿಲ್ಲವೆಂಬ ನಂಬಿಕೆ. ಇಲ್ಲಿ ಇರುವ "ಆಲದ ಮರವು ಪಾಂಡವರು ನೆಟ್ಟದ್ದು" ಎಂಬ ಮೌಖಿಕ ಆಕರವಾಗಿದೆ.

## ಮುರುಘರಾಜೇಂದ್ರ ಮಠ

ಧಾರ್ಮಿಕ ಕಟ್ಟಡಗಳಲ್ಲಿ ಸಮಾವೇಶವಾಗುವ ಮಠಗಳು ಬೇರೆ ಬೇರೆ ಮತಪಂಥಗಳ ಸ್ವಾಮಿಗಳ ವಾಸಸ್ಥಾನಗಳಾಗಿರುತ್ತವೆ. ಹಾಗಾಗಿ ಇವುಗಳಲ್ಲಿ ದೇವಾಲಯದ ಲಕ್ಷಣಗಳು ಕಂಡುಬರುವುದಿಲ್ಲ. ಅಂದರೆ ಕೆಲವು ಮಠಗಳಲ್ಲಿ ಪ್ರತ್ಯೇಕವಾಗಿ ದೇವಾಲಯಗಳನ್ನು ನಿರ್ಮಿಸಲಾಗಿರುತ್ತದೆ. ಚಿತ್ರದುರ್ಗದ ಪಾಳೆಯಗಾರರು ದೇವಾಲಯಗಳ ಜೊತೆಗೆ ಕೆಲವು ಮಠಮಾನ್ಯಗಳನ್ನು ನಿರ್ಮಿಸಿ ದಾನದತ್ತಿಗಳನ್ನು ನೀಡಿದ್ದಾರೆ. ಚಿತ್ರದುರ್ಗದ ಬೆಟ್ಟದ ಮೇಲಿರುವ ಮುರುಘರಾಜೇಂದ್ರ ಮಠ ಇದು ಕ್ರಿ.ಶ. ೧೬೮೯ ರಿಂದ ೧೭೨೧ರವರೆಗೆ ಆಳ್ವಿಕೆ ನಡೆಸಿದ ಬಿಚ್ಚುಗತ್ತಿ ಭರಮಣ್ಣ ನಾಯಕನು ಚಿತ್ರದುರ್ಗದ ಬೃಹನ್ಮಠದ ಪರಂಪರೆಯಲ್ಲಿನ ೮ನೆಯ ಪಟ್ಟಾಧಿಕಾರಿಗಳಾಗಿದ್ದು ಶ್ರೀ. ಮುರುಘೇಂದ್ರ ಸ್ವಾಮಿಗಳ ಆಶೀರ್ವಾದಂತೆ ಚಿತ್ರದುರ್ಗದ ರಾಜನಾಗಿದ್ದರಿಂದ ತನ್ನ ಭಕ್ತಿ ಪೂರ್ವಕ ಕಾಣಿಕೆಯಾಗಿ ಬೆಟ್ಟದ ಮೇಲಿನ ಸಂಪಿಗೆ ಸಿದ್ದೇಶ್ವರ ದೇವಾಲಯದ ಪಕ್ಕದಲ್ಲಿ ೩೬೦ ಅಂಕಣಗಳ ವಿಸ್ತಾರವಾದ ದೊಡ್ಡ ಮಠವನ್ನು ಕಟ್ಟಿಸಿಕೊಟ್ಟನು. ಅಲ್ಲದೆ ತನ್ನ ಮಕ್ಕಳೊಬ್ಬನನ್ನು ಅದರ ಸೇವೆಗೆ ನೇಮಿಸಿದ. ಈ ಪ್ರಸಂಗವನ್ನು ಚಿತ್ರದುರ್ಗ ಇತಿಹಾಸದ ಕಡತಗಳಲ್ಲಿ ಸಂಕ್ಷಿಪ್ತವಾಗಿಯೂ ಮಹಾದೇವನ ಮಹಲಿಂಗೇಂದ್ರ ವಿಜಯ ಎಂಬ ಸಾಹಿತ್ಯ ಕೃತಿಯಲ್ಲಿ ವಿವರವಾಗಿಯೂ ವರ್ಣಿಸಲಾಗಿದೆ. ಇವನು ಈ ಮಠಕ್ಕೆ ನೀಡಿದ ಘಂಟೆಯಲ್ಲಿ ಇವನ ಹೆಸರಿರುವುದು ವಿಶೇಷವಾಗಿದೆ. ಆದರೆ ಬೆಟ್ಟದ ಮೇಲಿರುವ ಈ ಮೂಲ

ಮಠ ಈಗ ಬಳಕೆಯಲ್ಲಿಲ್ಲ. ನಂತರ ಬೆಟ್ಟದ ಕೆಳಗಿರುವ ಈಗಿನ ಮುರುಘಮಠವನ್ನು ಕ್ರಿ.ಶ. ೧೭೦೩ರಲ್ಲಿ ಸ್ಥಾಪಿಸಲಾಯಿತೆಂದು ತಿಳಿದುಬರುತ್ತದೆ.

ಬೆಟ್ಟದ ಕೆಳಗಿರುವ ಈ ಮಠವು ನಗರದ ದಕ್ಷಿಣ ಭಾಗದಲ್ಲಿದೆ. ಇದು ವಿಶಾಲವಾದ ವಾಸ್ತು ಸ್ಮಾರಕವಾಗಿದ್ದು, ಚಿತ್ರದುರ್ಗದ ಪಾಳೆಯಗಾರರ ಧಾರ್ಮಿಕ ವೈಶಾಲ್ಯಕ್ಕೆ ಸಾಕ್ಷಿಯಾಗಿದೆ. ಹೀಗಾಗಿ ಚಿತ್ರದುರ್ಗ ಪರಿಸರದಲ್ಲಿ ಇದೊಂದು ವಿಶಿಷ್ಟ ಕಟ್ಟಡವೆಂದು ಗುರುತಿಸಬಹುದಾಗಿದೆ (ತಿಪ್ಪಣ್ಣ ಮರಿಕುಂಟೆ ೧೯೭೯:೮೬).

## ದೀಪ ಮತ್ತು ಉಯ್ಯಾಲೆ ಸ್ತಂಭ

ಚಿತ್ರದುರ್ಗದ ಕೋಟೆಯಲ್ಲಿ ಕಂಡುಬರುವ ದೇವಾಲಯಗಳ ಮತ್ತೊಂದು ಗಮನಾರ್ಹ ವಾಸ್ತುಗಳೆಂದರೆ ದೀಪಸ್ತಂಭಗಳು ಇವು ಕೂಡ ಬೃಹತ್ ಪ್ರಮಾಣದಿಂದಾಗಿ ಗಮನ ಸೆಳೆಯುತ್ತವೆ. ಒಂದೆರಡು ದೇವಾಲಯಗಳನ್ನು ಹೊರತುಪಡಿಸಿದರೆ, ಈ ದೀಪಸ್ತಂಭಗಳನ್ನು ೨ ನೆಲೆಗಳಲ್ಲಿ ಸ್ಥಾಪಿಸಲಾಗಿರುತ್ತದೆ. ಮೊದಲನೆಯದಾಗಿ ದೇವಾಲಯದ ಮುಂಭಾಗದಲ್ಲಿ ನಿರ್ಘಂಡಿಯ ಸ್ತಂಭ ಕೆಳಗೆ ಶಿಲ್ಪಗಳನ್ನು ತುದಿಯಲ್ಲಿ ದೀಪದ ಮಾಡುಗಳನ್ನು ಮತ್ತು ದೊಡ್ಡ ಪ್ರಾಣತಿಯನ್ನು ಹೊಂದಿ ವಿಶಿಷ್ಟವೆನಿಸುತ್ತವೆ. ಇಲ್ಲಿ ಕಂಡುಬರುವಂತಹ ಉತ್ಸವಾಂಬೆ, ಬೆಟ್ಟದ ಏಕನಾಥೇಶ್ವರಿ, ಹುಲ್ಲೂರಿನ ಆಂಜನೇಯ ದೇವಾಲಯಗಳಲ್ಲಿ ಎರಡನೆಯ ಕಂಬಗಳು ದೇವಾಲಯದ ಪ್ರಾಕಾರ ಹೊರಭಾಗದಲ್ಲಿವೆ. ಇವೆಲ್ಲ ಬೃಹತ್ ಪ್ರಮಾಣದಲ್ಲಿವೆ. ಪುಟ್ಟ ವೇದಿಕೆಯ ಅಧಿಷ್ಠಾನಗಳ ಮಧ್ಯದಲ್ಲಿ ಈ ಕಂಬಗಳನ್ನು ನಿಲ್ಲಿಸಲಾಗಿರುತ್ತದೆ. ಇವು ಕೆಳಗೆ ಮತ್ತು ಮೇಲೆ ಅಸಮ ಚೌಕಭಾಗಗಳನ್ನು, ಮಧ್ಯದಲ್ಲಿ ೮-೧೦ ಮುಖಗಳ ಲಂಬ ಪಟ್ಟಿಕೆಗಳನ್ನು ಹೊಂದಿರುತ್ತವೆ. ತುದಿಯಲ್ಲಿ ಕಂಬಗಳು ಅವುಗಳ ಮೇಲೆ ಫಲಕಗಳಿರುತ್ತದೆ. ಈ ದೇವಾಲಯಗಳ ಕಂಬಗಳ ಕೆಳಭಾಗದಲ್ಲಿ ಗರ್ಭಗೃಹಕ್ಕೆ ಎದುರಾಗಿ ಪ್ರಾಯಶಃ ದೇವಾಲಯಗಳ ನಿರ್ಮಾತೃಗಳಾದ ಅಂಜಲಿ ಮುದ್ರೆಯಲ್ಲಿರುವ ರಾಜರಾಣಿಯರ, ಗರುಡನ ಶಿಲ್ಪಗಳನ್ನು ಕಾಣಬಹುದಾಗಿದೆ. ಉದಾ: ಏಕನಾಥೇಶ್ವರಿ ದೇವಾಲಯದ ಮುಂಭಾಗದಲ್ಲಿರುವ ದೀಪಸ್ತಂಭವು ಸು. ೪೦ ಅಡಿ ಎತ್ತರವಾಗಿದ್ದು, ೩ ಅಡಿ ದಿಂಡಿಗೆಯ ಮೇಲೆ ನಿರ್ಮಿಸಲಾಗಿದೆ. ಇದರಲ್ಲಿ ಗರುಡನು ಕೈ ಮುಗಿದು ನಿಂತಿರುವ ಉಬ್ಬು ಶಿಲ್ಪವನ್ನು ಕಾಣಬಹುದಾಗಿದೆ.

ಚಿತ್ರದುರ್ಗ ಪಾಳೆಯಗಾರರು ಇವುಗಳ ನಿರ್ಮಾಣಕ್ಕೆ ಮಹತ್ವವನ್ನು ನೀಡಿದ್ದಾರೆ. ಇವು ದೇವಾಲಯದ ಹೊರಭಾಗದಲ್ಲಿ ದೇವಾಲಯದಿಂದ ಅನತಿ ದೂರದಲ್ಲಿರುತ್ತವೆ. ಬೃಹದಾಕಾರದ ಏಕಶಿಲೆಯ ೨ ಕಂಬಗಳನ್ನು ಪರಸ್ಪರ ಸು. ೫ಮೀ. ಸಮಾನಂತರದಲ್ಲಿ ನಿಲ್ಲಿಸಲಾಗಿರುತ್ತದೆ. ಈ ೨ ಕಂಬಗಳ ತುದಿಯಲ್ಲಿ ಒಂದರ ಮೇಲೊಂದರಂತೆ ಇರುವ ೨ ಅಡ್ಡ ತೊಲೆಗಳಿಂದ

ಸೇರಿಸಲಾಗಿರುತ್ತದೆ. ಈ ಅಡ್ಡ ತೊಲೆಗಳ ನಡುವೆ ಸ್ವಲ್ಪ ಅಂತರವಿರುತ್ತದೆ. ಮೇಲಿನ ಅಡ್ಡ ತೊಲೆಗಳ ಮೇಲೆ ವಿವಿಧ ರೀತಿಯ ಅಲಂಕಾರಣೆಗಳಿರುತ್ತವೆ. ಹಂಪಿಯ ವಿಜಯವಿಠ್ಠಲ ದೇವಾಲಯದ ಸಮೀಪವಿರುವ ಅರಸನ ತುಲಾಭಾರ ಕಂಬವನ್ನು ಹೋಲುವ ಇದು ಪ್ರಾಯಶಃ ಕರ್ನಾಟಕದ ಬೇರೆ ಯಾವುದೇ ರಾಜಮನೆತನಗಳ ದೇವಾಲಯಗಳಲ್ಲಿ ಕಂಡುಬರುವುದಿಲ್ಲ (ರಮೇಶ್ ೧೯೭೭:೩೧).

## ಬತೇರಿಗಳು

ಚಿತ್ರದುರ್ಗದ ಕೋಟೆಯ ರಕ್ಷಣಾ ಅವಶೇಷಗಳಲ್ಲಿ ಬತೇರಿಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಆದ್ದರಿಂದ ಚಿತ್ರದುರ್ಗದ ಬೆಟ್ಟದಲ್ಲಿ ಅನೇಕ ಬತೇರಿಗಳನ್ನು ನಿರ್ಮಿಸಿದ್ದಾರೆಂದು ತಿಳಿಯಬಹುದಾಗಿದೆ. ಬತೇರಿಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನೇಕ ಕೃತಿ ಮತ್ತು ಲೇಖನಗಳನ್ನು ಬಳಸಿಕೊಳ್ಳಲಾಗಿದೆ. ಅವು ಗಿರಿಜ ಟಿ. ಅವರ ಚಿತ್ರದುರ್ಗ ಜಿಲ್ಲಾ ದರ್ಶಿನಿ, ೧೯೯೧, ಲಕ್ಷ್ಮಣ್ ತೆಲಗಾವಿ, ವೆಂಕಣ್ಣಾಚಾರಿ ಅವರ ಚಿತ್ರದುರ್ಗ ದರ್ಶಿನಿ, ೧೯೮೦, ರಾಜಶೇಖರಪ್ಪ ಬಿ. ಅವರ ದುರ್ಗಶೋಧನ, ೨೦೦೧, ತಿಪ್ಪೇಸ್ವಾಮಿ ಎಂ.ಎಸ್. ಅವರ ರಕ್ಷಣಾ ವಾಸ್ತುಶಿಲ್ಪ, ಚಿತ್ರದುರ್ಗ ಜಿಲ್ಲೆ, ೨೦೦೪ ಎಂಬ ಲೇಖನಗಳ ಬರವಣಿಗೆಯನ್ನು ಹೆಚ್ಚಿನದಾಗಿ ಬಳಸಿಕೊಂಡು ಈ ಅಧ್ಯಯನವನ್ನು ತಯಾರಿಸಲು ಪ್ರಯತ್ನಿಸಲಾಗಿದೆ.

ಚಿತ್ರದುರ್ಗದ ಬೆಟ್ಟ ಈ ಹಿಂದೆ ಹೇಳಿದಂತೆ ಸಪ್ತ ಶಿಖರಗಳಿಂದ ಕೂಡಿದೆ. ಈ ಸಪ್ತಶಿಖರಗಳನ್ನು ಬಳಸಿಕೊಂಡು ವಿಸ್ತಾರವಾದ ಕೋಟೆಯನ್ನು ನಿರ್ಮಿಸಲಾಗಿದೆ. ಸಪ್ತಶಿಖರಗಳ ವಿವಿಧ ಭಾಗಗಳಲ್ಲಿ ನಿರ್ಮಿಸಿರುವ ದ್ವಾರಬಾಗಿಲು, ಅರಮನೆ, ಕಂದಕ, ಖಜಾನೆ, ಬುರುಜು, ಕಣಿವೆ ಪ್ರದೇಶಗಳೊಡನೆ ಸಂಪರ್ಕ ಸಾಧಿಸಲು ಸಪ್ತಶಿಬಿರಗಳ ಮೇಲ್ಭಾಗದಲ್ಲಿ ಹಾಗೂ ಆಯಕಟ್ಟಿನ ಸ್ಥಳಗಳಲ್ಲಿ ಬತೇರಿಗಳನ್ನು ಸ್ಥಾಪಿಸಲಾಗಿದೆ. ಇವುಗಳನ್ನು ಹೆಚ್ಚಾಗಿ ಕೋಟೆಗೋಡೆಯಿಂದ ಪ್ರತ್ಯೇಕಗೊಳಿಸಿ ಕಟ್ಟಲಾಗಿದೆ. ಕೋಟೆಗೆ ಲಗ್ಗೆ ಹಾಕಲು ಬರುವ ಶತ್ರುಗಳನ್ನು ದೂರದಿಂದಲೇ ವೀಕ್ಷಿಸಿ ಅಪಾಯದ ಸಂಕೇತಗಳನ್ನು ಅರಿಯಲು ಇವು ಸಹಾಯಕವಾಗಿದ್ದವು. ಒಂದು ಬತೇರಿಯಿಂದ ಮತ್ತೊಂದು ಬತೇರಿಗೆ ಸಂಪರ್ಕ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಿದ್ದವು. ಸೈನಿಕರು ಬತೇರಿಗಳನ್ನು ಗುರುತಿಸುವ ಸಲುವಾಗಿ ವಿವಿಧ ಹೆಸರುಗಳಿಂದ ಕರೆಯಲಾಗಿದೆ. ಇಂತಹ ಬತೇರಿಗಳು ಕೋಟೆಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿವೆ.

ಅವುಗಳಲ್ಲಿ ಮುಖ್ಯವಾಗಿ ನೆಲ್ಲಿಕಾಯಿ ಸಿದ್ದಪ್ಪನ ಬತೇರಿ, ರಣಬತೇರಿ, ಲಾಲ್‌ಬತೇರಿ, ತುಪ್ಪದಕೊಳ ಬತೇರಿ, ಕಹಳೆ ಬತೇರಿ, ಬಸವನ ಬತೇರಿ ಹಾಗೂ ಝುಂಡಾ ಬತೇರಿಗಳಾಗಿವೆ (ತಿಪ್ಪೇಸ್ವಾಮಿ ೨೦೦೪:೧೯೭).

## ನೆಲ್ಲಿಕಾಯಿ ಸಿದ್ದಪ್ಪನ ಬತೇರಿ

ದಕ್ಷಿಣ ಭಾಗದಲ್ಲಿ ಅತ್ಯಂತ ಎತ್ತರ ಬೆಟ್ಟದ ಮೇಲೆ ನಿರ್ಮಿಸಿರುವ ಬತೇರಿ ಇದಾಗಿದೆ. ಇದರ ಮುಂಭಾಗ ನೆಲ್ಲಿಕಾಯಿಯಷ್ಟು ಲಿಂಗವನ್ನು ಹುಟ್ಟು ಬಂಡೆಯ ಮೇಲೆ ಕೊರೆದು ದೇವಾಲಯವನ್ನು ನಿರ್ಮಿಸಿರುವುದರಿಂದ ಈ ಬತೇರಿಗೆ ಈ ಹೆಸರು ಬಂದಿದೆ. ಈ ಬೆಟ್ಟಪರಿಸರವು ಕಲ್ಲು ಬಂಡೆಗಳಿಂದ ಕೂಡಿದ ದುರ್ಗಮ ಪ್ರದೇಶದಾಗಿದೆ. ಗೋಪಾಲಸ್ವಾಮಿ ದೇವಸ್ಥಾನದ ಹಿಂಭಾಗದಲ್ಲಿರುವ ಹೊರಸುತ್ತಿನ ಕೋಟೆಯಿಂದ ಹಾಗೂ ಲಾಲ್‌ಬತೇರಿಯಿಂದಲೂ ಈ ಬತೇರಿಗೆ ಬರಲು ಮಾರ್ಗಗಳಿವೆ (ತೆಲಗಾವಿ, ವೆಂಕಣ್ಣಾಚಾರ್ ೧೯೮೦:೩೮). ಈ ಬಂಡೆಗಳ ಮಧ್ಯೆ ನೂರಾರು ಗುಹೆಗಳಿವೆ. ಬತೇರಿಯ ಉತ್ತರ ದಕ್ಷಿಣವಾಗಿ ೪೧ ಅಡಿ ಪೂರ್ವ ಪಶ್ಚಿಮವಾಗಿ ೩೫ ಅಡಿ ಉದ್ದ ೪ ಮೀ. ಎತ್ತರವಿದೆ. ಮೇಲ್ಭಾಗದಲ್ಲಿ ಒಂದು ಅಡಿ ದಪ್ಪದ ಗಾರೆದಿಂಡು ಇದೆ. ಇಲ್ಲಿಂದ ಚಿತ್ರದುರ್ಗ ಬೆಟ್ಟದ ಪರಿಸರವೆಲ್ಲವೂ ಗೋಚರಿಸುತ್ತದೆ. ಅಲ್ಲದೆ ಹತ್ತಿರವಿರುವ ಬೆಟ್ಟಗುಡ್ಡದ ಸಾಲುಗಳು ಕಣಿವೆ ಪ್ರದೇಶಗಳು ಕಂಡುಬರುತ್ತವೆ. ದಕ್ಷಿಣ ಭಾಗ ಮತ್ತು ನೈರುತ್ಯದ ಭಾಗಗಳನ್ನು ಬಿಟ್ಟರೆ ಉಳಿದಂತೆ ಪಶ್ಚಿಮದಲ್ಲಿ ಹೊಳಲ್ಕೆರೆ ಬೆಟ್ಟದ ಸಾಲು ಕಂದವಾಡಿಗುಡ್ಡ, ವಾಯುವ್ಯಕ್ಕೆ ಸೀಬಾರದ ಕಣಿವೆ, ಉತ್ತರದಲ್ಲಿ ರಂಗವ್ವನಹಳ್ಳಿ ಗುಡ್ಡಗಳು, ಈಶಾನ್ಯದಲ್ಲಿ ಜಟಂಗ ರಾಮೇಶ್ವರ, ಮೊಳಕಾಲ್ಮೂರು ಗಿರಿಶ್ರೇಣಿಗಳು, ಪೂರ್ವದಲ್ಲಿ ತಳಕಿನಗುಡ್ಡ, ನಿಡಗಲ್ಲು ಮುಂತಾದ ಬೆಟ್ಟದ ಸಾಲುಗಳನ್ನು ಈ ಬತೇರಿಯಿಂದ ವೀಕ್ಷಿಸಬಹುದು.

ಚಿತ್ರದುರ್ಗದ ಪಾಳೆಯಗಾರರು ಈ ಎಲ್ಲ ಗುಡ್ಡಗಳನ್ನು ಒಳಗೊಂಡಂತೆ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸುತ್ತಿದ್ದ ಸಂದರ್ಭದಲ್ಲಿ ಈ ಬತೇರಿಯ ಮೇಲಿನಿಂದ ಸಂಪರ್ಕವನ್ನು ಕಲ್ಪಿಸಿ ಕೊಂಡಿದ್ದಾರೆನ್ನಬಹುದು. ಬತೇರಿಯ ಸಮೀಪದಲ್ಲಿ ೮ x ೧೧ ಮೀ. ವಿಸ್ತಾರವಿರುವ ಕಲ್ಲು ಮಂಟಪವಿದ್ದು ಈ ಮಂಟಪವನ್ನು ಬೊಪ್ಪಯ್ಯನ ಚಾವಡಿ ಎಂದು ಹೇಳುತ್ತಾರೆ. ಈ ಮಂಟಪದಲ್ಲಿ ೨೦ ಕಂಬಗಳಿವೆ (ಜೋಯಿಸ್ ೧೯೬೮:೩೭-೪೯).

ನೆಲ್ಲಿಕಾಯಿ ಸಿದ್ದಪ್ಪನ ಬತೇರಿಯಿಂದ ಕಹಳೆ ಬತೇರಿಯವರೆಗೂ ಸಾಗಿರುವ ಕೋಟೆಯ ಸಾಲು ೯ ಅಡಿ ಅಗಲವಾಗಿದ್ದು, ೨೫ ಅಡಿ ಎತ್ತರವಾಗಿದೆ. ೨೪ x ೧೮ ಇಂಚಿನ ಕಲ್ಲುಗಳನ್ನು ಗೋಡೆಗೆ ಬಳಸಲಾಗಿದೆ. ಬತೇರಿಯ ದಕ್ಷಿಣಕ್ಕೆ ಹುಟ್ಟು ಬಂಡೆಯ ಮೇಲೆ ಕತ್ತಿಯನ್ನು ಮಸಿಯುತ್ತಿದ್ದಾರೆನ್ನಲಾದ ಮಸಗಲ್ಲುಗಳಿವೆ. ಕೋಟೆ ಗೋಡೆಯ ಮುಂದೆ ಚಿಕ್ಕ ಮಂಟಪವಿದ್ದು, ಮಂಟಪದೊಳಗೆ ಹಾಗೂ ಗೋಡೆಗೆ ಹೊಂದಿಕೊಂಡಂತೆ ಕಪ್ಪು ಶಿಲೆಯ ೨೦ x ೨೮ ಇಂಚಿನ ಉದ್ದದ ೯ ಇಂಚು ದಪ್ಪದ ಕಲ್ಲಿನ ಮುಂಭಾಗಕ್ಕೆ ಬಸವನ ರೂಪ ಕೊಡಲಾಗಿದೆ. ಬಸವನ ಎರಡೂ ಕಡೆಯಲ್ಲಿ ೫ ಕೋವಿ ಕಿಂಡಿಗಳನ್ನು ವಿರುದ್ಧ ದಿಕ್ಕಿನಲ್ಲಿ

ರಚಿಸಿದ್ದಾರೆ. ಕೋಟೆಯೊಳಗಿನಿಂದ ನೋಡುಗರಿಗೆ ಒಂದೇ ಕಿಂಡಿಯಾಗಿ ಕಂಡರೂ ಒಳಭಾಗದಲ್ಲಿ ೫ ಭಾಗಗಳ ದಿಕ್ಕನ್ನು ನೋಡಬಹುದಾಗಿದೆ. ಈ ಬತೇರಿಯ ಉತ್ತರಕ್ಕೆ ಕಹಳೆ ಬತೇರಿ, ದಕ್ಷಿಣಕ್ಕೆ ನೆಲ್ಲಿಕಾಯಿ ಸಿದ್ದಪ್ಪನ ಬತೇರಿ ಕೋಟೆಗಳಿಂದ ಸಂಪರ್ಕ ಕಲ್ಪಿಸಲಾಗಿದೆ. ಪೂರ್ವ ಭಾಗದಲ್ಲಿ ಎರಡು ಸುತ್ತಿನ ಕೋಟೆಯಿದ್ದು ವಿಶೇಷ ರಕ್ಷಣಾತ್ಮಕ ಪ್ರವೇಶವಿದೆ.

ಗೋಪಾಲಸ್ವಾಮಿ ದೇವಸ್ಥಾನದಿಂದ ನೆಲ್ಲಿಕಾಯಿ ಸಿದ್ದಪ್ಪನ ಬತೇರಿಗೆ ಬರುವಾಗ ಅನೇಕ ಸ್ಮಾರಕಗಳನ್ನು ಕಾಣಬಹುದು. ಭಾರೀ ದೊಡ್ಡ ಗಾತ್ರದ ಕಲ್ಲುಗಳಿಂದ ವ್ಯವಸ್ಥಿತವಾದ ಕೋಟೆಯ ಸಾಲುಗಳು ಈ ಭಾಗದಲ್ಲಿವೆ. ಕಡಿದಾದ ಬಂಡೆಯ ಮೇಲೆ ೪೩ ಮೆಟ್ಟಿಲುಗಳನ್ನು ಕೊರೆಯಲಾಗಿದೆ. ಮೆಟ್ಟಿಲುಗಳ ಉದ್ದ ೬೨ ಇಂಚು ಇದ್ದು ೧೧ ಇಂಚು ಅಗಲವಿದೆ. ಇದರ ಮುಂಭಾಗ ೧೭ x ೧೭ ಮೀ. ಅಳತೆಯ ಗಾರೆದೊಣೆ ಇದೆ. ಈ ಗಾರೆದೊಣೆಯ ಹಿಂಭಾಗದ ೨೮ x ೨೮ ಅಡಿಯಲ್ಲಿ ನಿರ್ಮಾಣಗೊಂಡ ೧೬ ಕಂಬಗಳ ಕಲ್ಲಿನ ಮಂಟಪವಿದೆ. ಮಂಟಪದ ಹಿಂಭಾಗ ಚೋರಕಿಂಡಿಯಿದೆ. ಈ ಚೋರಕಿಂಡಿಯು ಇಳಿಜಾರಾದ ಬಂಡೆಯ ಮೇಲೆ ನಿರ್ಮಿಸಲಾಗಿದೆ. ಬಂಡೆಯ ೨ ಕಡೆ ಕಬ್ಬಿಣದ ಸಲಾಕೆಗಳನ್ನು ಬಡಿದು ಗೋಡೆ ಜಾರದಂತೆ ನಿರ್ಮಿಸಿದ್ದಾರೆ. ಮೇಲ್ಭಾಗದಲ್ಲಿ ಪಾಳು ಬಿದ್ದಿರುವ ಮಂಟಪದ ಬಳಿ ೧೫೦ ಮೀ. ವಿಸ್ತೀರ್ಣ ಹೊಂದಿರುವ ವಿಶಾಲವಾದ ಬತೇರಿ ಇದೆ. ಬತೇರಿಯೊಳಗೆ ಮದ್ದು ಸಂಗ್ರಹಿಸಲು ನಿರ್ಮಿಸಿದ ಚಿಕ್ಕ ಕೋಣೆಯಿದೆ. ಹೀಗೆ ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟ ಪರಿಸರವು ಅನೇಕ ಸ್ಮಾರಕಗಳನ್ನು ಹೊಂದಿದೆ.

**ಲಾಲ್ ಬತೇರಿ**

ಲಾಲ್ ಬತೇರಿಯು ಅರಮನೆ ಪಾಳಿನ ದಕ್ಷಿಣ ಬೆಟ್ಟದ ಮೇಲಿದೆ. ಇದಕ್ಕೆ ಕೆಂಪು ಬತೇರಿ ಬೆಟ್ಟ ಎಂಬ ಹೆಸರಿದೆ. ಕೆಂಪು ವರ್ಣದ ಶಿಲೆಗಳಿಂದ ಕಟ್ಟಿರುವ ಈ ಬತೇರಿಯು ತುಂಬಾ ಸುಂದರವಾಗಿದೆ. ಲಾಲ್ ಬತೇರಿಯು ಚಂದ್ರಾಕಾರವಾಗಿದ್ದು ೫೦ ಮೀ. ಸುತ್ತಳತೆ ಹಾಗೂ ೧೦ ಅಡಿ ಎತ್ತರವಿದೆ. ಬತೇರಿಗೆ ೨೮ x ೯ ಇಂಚಿನ ಕಲ್ಲುಗಳನ್ನು ಬಳಸಲಾಗಿದೆ. ಇಲ್ಲಿಂದ ಆಗ್ನೇಯ ದಿಕ್ಕಿನಲ್ಲಿರುವ ಜೋಗಿಮಟ್ಟಿ, ಕುಂಚಿಗನಹಾಳ ಕಣಿವೆ, ಪೂರ್ವದಿಕ್ಕಿಗೆ ರಾಮದೇವರ ಒಡ್ಡು, ತಿಮ್ಮಣ್ಣನಾಯಕನ ಕೆರೆ, ಹೊರಸುತ್ತಿನ ಕೋಟೆಗಳು ಹಾಗೂ ಪಹರೆ ಗೃಹಗಳು ಕಂಡುಬರುತ್ತವೆ.

**ತುಪ್ಪದಕೊಳ ಬತೇರಿ**

ಬೆಟ್ಟದ ಮಧ್ಯಭಾಗದಲ್ಲಿ ದ್ವೀಪದಂತಿರುವ ಅರ್ಧಗೋಳಾಕಾರದ ಸೀಳು ಬಂಡೆಯೊಂದರ ಮೇಲೆ ಇರುವ ಬತೇರಿಗೆ ತುಪ್ಪದ ಕೊಳ ಬತೇರಿ ಎಂದು ಕರೆಯಲಾಗಿದೆ. ಇದನ್ನು ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ಕೊರೆದಿರುವ ಕಲ್ಲುಬಾವಿ ಎನ್ನಲಾಗಿದೆ. ಬೃಹನ್ಮಠದ

ಹಿಂಭಾಗದಿಂದ ಈ ಕಡಿದಾದ ಬಂಡೆಯನ್ನು ಹತ್ತಲು ೧೮೯ ಹೆಜ್ಜೆಗಳನ್ನು ಕೊರೆದಿದ್ದಾರೆ. ಮೊದಲನೇ ಹೆಜ್ಜೆಯ ಬಳಿ ಇಬ್ಬರು ಭಕ್ತರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಒಂದು ಹೆಜ್ಜೆಯಿಂದ ಮತ್ತೊಂದು ಹೆಜ್ಜೆಗೆ ಕನಿಷ್ಠ ಒಂದು ಅಡಿ ಅಂತರವಿದೆ. ಇವುಗಳನ್ನು ಸ್ಥಳೀಯರು ಕುದುರೆ ಹೆಜ್ಜೆಗಳೆಂದು ಕರೆಯುತ್ತಾರೆ. ಈ ಬತೇರಿಯ ಮೇಲೆ ದುಂಡಾಕಾರದ ವಿಶಾಲವಾದ ಬತೇರಿಯಿದೆ. ಅದರ ಮೇಲೆ ಅರ್ಧ ಹೂತುಹೋದ ಕಲ್ಲುಮಂಟಪದ ಅವಶೇಷಗಳಿವೆ. ಬತೇರಿಗೆ ಹೊಂದಿಕೊಂಡಂತೆ ೮ ಅಡಿ ಆಳದ ದೊಣೆಯಿದೆ. ಇವುಗಳ ಸಮೀಪದಲ್ಲಿ ತುಪ್ಪದ ಕೊಳವಿದೆ. ಬಾವಿಯ ಆಳ ೨೫ ಅಡಿಗಳಷ್ಟಿದೆ. ಬಾವಿಯನ್ನು ಇಟ್ಟಿಗೆ ಮತ್ತು ನಯಗಾರೆಯಿಂದ ನಿರ್ಮಿಸಲಾಗಿದೆ. ಇದರಲ್ಲಿ ೯ ಅಡಿ ಎತ್ತರದ ಮಂಟಪವೂ ಅದನ್ನು ಪ್ರವೇಶಿಸಲು ೩ ಅಡಿ ಎತ್ತರದ ಪುಟ್ಟ ಬಾಗಿಲಿದೆ. ಬಾವಿಯೊಳಗೆ ಇಳಿಯಲು ೧೪ ಮೆಟ್ಟಿಲುಗಳಿದ್ದ ಬಾವಿಯ ಮೇಲ್ಭಾಗವನ್ನು ೮ ಕಲ್ಲು ತೊಲೆಗಳಿಂದ ಮುಚ್ಚಿದ್ದಾರೆ. ಈ ಕಲ್ಲುಹಾಸುಗಳ ಮೇಲೆ ಗಾರೆ ಹಾಕಿದ್ದಾರೆ. ಬಾವಿಯ ಒಳಬದಿ ೨೫ ಅಡಿ ಉದ್ದ ೪ ಅಡಿ ೧೦ ಅಂಗುಲ ಅಗಲವಿದೆ. ಗಾಳಿ ಬೆಳಕಿಗೆ ೩ ಕಿಂಡಿಗಳನ್ನು ಕಲ್ಲುಗಳ ಮಧ್ಯೆ ಬಿಟ್ಟಿದ್ದಾರೆ. ಇಲ್ಲಿರುವ ಎಲ್ಲ ವ್ಯವಸ್ಥೆಗಳನ್ನು ಗಮನಿಸಿದರೆ ಇದು ಮದ್ದಿನಮನೆ/ಮದ್ದು ಸಂಗ್ರಹ ಕೋಣೆಯಾಗಿತ್ತೆನ್ನಬಹುದು. ಏಕೆಂದರೆ ಬತೇರಿಯ ಮೇಲೆ ಪಹರೆ ಕಾಯುವ ಸೈನಿಕರಿಗೆ ಸಾಕಾಗುವಷ್ಟು ಮದ್ದನ್ನು ಇಲ್ಲಿ ಸಂಗ್ರಹಿಸುತ್ತಿದ್ದರು ಎನ್ನಬಹುದು. ಈ ಬತೇರಿಯ ಕಡಿದಾದ ಬಂಡೆಯ ಮೇಲಿರುವುದರಿಂದ ತುರ್ತು ಪರಿಸ್ಥಿತಿಗಳಲ್ಲಿ ಬೇಗನೆ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿಡುತ್ತಿದ್ದರು. ಕಡಿದಾದ ಬಂಡೆಯ ಮೇಲೆ ಕೋಟೆ ಹತ್ತುವ ತರಬೇತಿಯನ್ನು ಹಿಂದೆ ಸೈನಿಕರಿಗೆ ಕೊಡುತ್ತಿದ್ದರೆಂದು ಹೇಳಲಾಗಿದೆ. ಬಹುಶಃ ಈ ಸಂದರ್ಭದಲ್ಲಿ ಈ ಬಂಡೆಯ ಮೇಲೆ ತುಪ್ಪವನ್ನು/ಎಣ್ಣೆಯನ್ನು ಸವರುತ್ತಿದ್ದರಿಂದ ತುಪ್ಪದಕೊಳದ ಬತೇರಿ ಎಂಬ ಹೆಸರು ಬಂದಿರುವ ಸಾಧ್ಯತೆ ಇದೆ. ಈ ಬತೇರಿಯಿಂದ ಅರಮನೆ ಪ್ರದೇಶ, ಒನಕೆ ಕಿಂಡಿ ಸಾಲು, ರಣಬತೇರಿ, ಲಾಲ್ ಬತೇರಿ, ಝುಂಡಾಬತೇರಿ, ಬಸವನ ಬತೇರಿ, ಭೀಮನ ಬಂಡೆ ಹೀಗೆ ಕೋಟೆಯ ಇಡೀ ಸುತ್ತ ಪ್ರದೇಶವು ಕಂಡುಬರುತ್ತದೆ (ತಿಪ್ಪೇಸ್ವಾಮಿ ೨೦೦೪:೧೯೦).

**ಕಹಳೆ ಬತೇರಿ**

ಬಸವನ ಬತೇರಿ ದಕ್ಷಿಣ ಭಾಗಕ್ಕೆ ಮತ್ತು ಅರಮನೆಯ ಪಾಳಿನ ಪೂರ್ವ ಬೆಟ್ಟದ ಮೇಲಿದೆ. ಇದನ್ನು ಹತ್ತಲು ದುರ್ಗಮವಾದ ದಾರಿಯಿದೆ. ಹೆಸರೇ ಹೇಳುವಂತೆ ಈ ಬತೇರಿಯ ಮೇಲೆ ಕಹಳೆಯನ್ನೂದುವವನು ಇದ್ದುದರಿಂದ ಈ ಹೆಸರು ಬಂದಿದೆ. ಈ ಬತೇರಿಯು ಆಯಕಟ್ಟಿನ ಸ್ಥಳದಲ್ಲಿ ಇದೆಯಲ್ಲದೇ ಬೆಟ್ಟದ ಎಲ್ಲ ಬುರುಜು ಬತೇರಿಗಳಿಂದ ವೀಕ್ಷಣಾ ಸಂಪರ್ಕವನ್ನು ಕಲ್ಪಿಸಿಕೊಂಡಿದೆ. ಪೂರ್ವ ದಿಕ್ಕಿನಲ್ಲಿ ಸು.೧೫ ಕಿ.ಮೀ. ದೂರದಲ್ಲಿರುವ ನನ್ನಿವಾಳದ ಏಕಶಿಲಾ ಬೆಟ್ಟವು ಇಲ್ಲಿಗೆ ಗೋಚರಿಸುತ್ತದೆ. ಅದೇ ರೀತಿ ಕುಂಚಿಗನಹಾಳ ಬತೇರಿ

ಕಣಿವೆ, ಕಿರುಬನಕಲ್ಲು ಬತೇರಿ, ಚೋಳದಗುಡ್ಡ ಬತೇರಿ, ಗಟ್ಟಿನೂರ್ ಬತೇರಿ ಹೀಗೆ ದೂರದ ಬೆಟ್ಟದ ಬುರುಜು ಬತೇರಿಗಳು ಕಹಳೆ ಬತೇರಿಗೆ ವೀಕ್ಷಣಾ ಸಂಪರ್ಕವನ್ನು ಕಲ್ಪಿಸಿಕೊಂಡಿವೆ. ಶತ್ರು ಸೈನ್ಯದ ಸುಳಿವು ತಿಳಿದ ಕೂಡಲೇ ನಿರ್ದಿಷ್ಟಪಡಿಸಿದ ಬಣ್ಣದ ಜ್ವಾಲೆಯನ್ನು ದೂರದ ಬುರುಜುಗಳ ಮೇಲಿದ್ದ ಪಹರೆಯವರು ಹಚ್ಚುತ್ತಿದ್ದರು. ಇದನ್ನು ಗಮನಿಸಿದ ಕಹಳೆ ಬತೇರಿಯ ಕಾವಲುಗಾರನು ತಕ್ಷಣವೇ ತನ್ನ ಕಹಳೆಯನ್ನು ಊದಿ ಪಶ್ಚಿಮದ ತಗ್ಗಿನಲ್ಲಿರುವ ಅರಮನೆಗೆ ಸೂಚನೆ ಕೊಡುತ್ತಿದ್ದನು. ಇದರಿಂದ ರಾಜನು ಮಿಂಚಿನಿಂದ ಆಕ್ರಮಣವನ್ನು ಎದುರಿಸಲು ಕ್ರಮ ಕೈಗೊಳ್ಳಲು ಸಾಧ್ಯವಾಗುತ್ತಿತ್ತು. ಬೆಟ್ಟ ಪರಿಸರದ ಯಾವ ಭಾಗದಿಂದಲೂ ಅಪಾಯ ಸಂಭವಿಸಿದರೆ ಆ ಭಾಗದಲ್ಲಿ ಸ್ಥಾಪಿಸಲಾಗಿದ್ದ ಬುರುಜುಗಳ ಮೇಲಿನ ಸೈನಿಕರ ಸಂಕೇತಗಳ ಮೂಲಕ ಕಹಳೆಯನ್ನು ತಿಳಿಸುತ್ತಿದ್ದರು. ಆಗ ತಕ್ಷಣವೇ ಕಹಳೆಯವರು ಸಿಡಿಲೆರಗಿದಂತೆ ಕಹಳೆಯನ್ನು ಮಾಡುತ್ತಿದ್ದನು. ಈ ಸಂಕೇತದ ಕಹಳೆಯು ಚಿತ್ರದುರ್ಗ ಬೆಟ್ಟದಲ್ಲೆಲ್ಲ ಪ್ರತಿಧ್ವನಿಸುತ್ತಿದ್ದಿತ್ತು. ಈ ಬತೇರಿಯ ಪರಿಸರದಲ್ಲಿ ಅನೇಕ ಗುಹೆಗಳು, ಕಟ್ಟಡದ ಅವಶೇಷಗಳು, ಮುಂತಾದ ಸ್ಮಾರಕಗಳಿವೆ (ಶ್ರೀನಿವಾಸ ೧೯೭೬:೯೭).

## ಬಸವನ ಬತೇರಿ

ಚಿತ್ರದುರ್ಗ ಕೋಟೆಯ ಸಪ್ತಶಿಖರಗಳೊಂದಾದ ಬೆಟ್ಟದ ಮೇಲೆ ವಿಶಾಲವಾಗಿ ನಿರ್ಮಿಸಿರುವ ಬುರುಜಿಗೆ ಬಸವನ ಬುರುಜೆಂದು ಕರೆಯಲಾಗಿದೆ. ಶ್ರೀರಂಗಪಟ್ಟಣದ ನವಾಬರ ಆಳ್ವಿಕೆಯಲ್ಲಿ ಈ ಬತೇರಿಗೆ ಸುಲ್ತಾನ ಬತೇರಿ ಎಂದು ಕರೆಯಲಾಗಿದೆ. ಉತ್ಸವಾಂಬ ದೇವಾಲಯದ ಹಿಂಭಾಗ ಬೆಟ್ಟದ ನೆತ್ತಿಯ ಮೇಲೆ ಈ ಬುರುಜನ್ನು ನಿರ್ಮಿಸಲಾಗಿದೆ. ಬಸವನ ಬುರುಜಿನ ಬೆಟ್ಟವು ಝುಂಡಾ ಬತೇರಿಯೊಂದಿಗೆ ಬೆಸೆದುಕೊಂಡಿದೆ. ರಕ್ಷಣಾ ದೃಷ್ಟಿಯಿಂದ ನಿರ್ಮಿಸಿದ ಈ ಬುರುಜಿನ ರಚನೆಯಂತೆ ಯಾವ ಬುರುಜುಗಳೂ ಇಲ್ಲ. ಈ ಬುರುಜಿನಿಂದ ಬೆಟ್ಟದ ಮೇಲಿನ ಇಡೀ ಉತ್ತರಭಾಗ ಮತ್ತು ಪೂರ್ವಭಾಗದ ರಕ್ಷಣೆ ಮಾಡುವ ದೃಷ್ಟಿಯಿಂದ ನಿರ್ಮಿಸಲಾಗಿದೆ ಎಂದು ಹೇಳಬಹುದಾಗಿದೆ. ಬೆಟ್ಟದ ಮೇಲಿರುವ ಎಲ್ಲ ಬತೇರಿಗಳನ್ನು ಇಲ್ಲಿಂದ ವೀಕ್ಷಿಸಬಹುದಾಗಿದೆ (ಗಿರಿಜ ೧೯೯೧:೭ ; ತಿಪ್ಪೇಸ್ವಾಮಿ ೨೦೦೪:೯೪).

## ಝುಂಡಾ ಬತೇರಿ

ಭೀಮನಕಲ್ಲು ಬೆಟ್ಟದ ಪೂರ್ವ ಭಾಗದಲ್ಲಿ ಈ ಝುಂಡಾ ಬತೇರಿಯಿದೆ. ಇದು ಏಕನಾಥೇಶ್ವರಿ ಮಂದಿರದ ಹಿಂಭಾಗದಲ್ಲಿರುವ ಕಾಲು ಹಾದಿಯ ಮೂಲಕ ಇಲ್ಲಿಗೆ ತಲುಪಬಹುದು. ಚಿತ್ರದುರ್ಗ ಪಾಳೆಯಗಾರರ ಸಂಸ್ಥಾನದ ಚಂದ್ರಾವಿ ಬಣ್ಣದ ಹಾಗೂ ಮನಗರುಡ ಚಿಹ್ನೆಯ ಧ್ವಜವನ್ನು ಪಾಳೆಯಗಾರರು ಇಲ್ಲಿ ಹಾರಿಸುತ್ತಿದ್ದರಂತೆ. ಧ್ವಜ ಹಾರಿಸುವ ಸ್ಥಳದಲ್ಲಿರುವ ಈ

ಬತೇರಿ ಝುಂಡಾ ಬತೇರಿ ಎಂದು ಹೆಸರಿಡಲಾಗಿದೆ. ಇಲ್ಲಿ ಶತ್ರು ಸೈನಿಕರು ಎಷ್ಟೇ ಹೋರಾಟ ಮಾಡಿದರೂ ತಾವು ಗೆದ್ದಂತೆ ಆಗುತ್ತಿರಲಿಲ್ಲ. ಆದರೆ ಈ ರೀತಿಯ ಧ್ವಜಗಳನ್ನು ಕೆಳಗಿಳಿಸಿ ಅವರ ಧ್ವಜವನ್ನು ಹಾರಿಸಿದಾಗಲೇ ಅವರು ಕೋಟೆಯನ್ನು ವಶಪಡಿಸಿಕೊಂಡಂತಾಗುತ್ತಿತ್ತು. ಆದ್ದರಿಂದ ಇಂತಹ ಧ್ವಜ ಬತೇರಿಗಳನ್ನು ವಿಶೇಷವಾಗಿ ಶತ್ರು ಸೈನಿಕರು ಇಲ್ಲಿಗೆ ನುಸುಳದಂತೆ ಅಪಾಯಕಾರಿ ದುರ್ಗಮ ಪ್ರದೇಶಗಳಲ್ಲಿ ನಿರ್ಮಿಸುತ್ತಿದ್ದರು. ಝುಂಡಾ ಬತೇರಿ ಇರುವ ಬಂಡೆಯು ಧ್ವಜ ಕಟ್ಟೆ ಇರುವ ಮತ್ತೊಂದು ಬಂಡೆಯನ್ನು ಸು. ೪-೫ ಅಡಿ ಅಂತರದಲ್ಲಿ ಬೇರ್ಪಡಿಸಿದೆ. ಈ ತಂತ್ರಗಾರಿಕೆಯು ವಿಶಿಷ್ಟವಾಗಿದ್ದು ಶತ್ರು ಸೈನ್ಯದವರು ಧ್ವಜವನ್ನಾಕ್ರಮಿಸಲು ಬಂದಾಗ ಈ ಕಲ್ಲುಗಳನ್ನು ಕೆಳಕ್ಕೆ ತಳ್ಳಿದರೆ ಸಾಕು ಯಾವುದೇ ಕಾರಣಕ್ಕೂ ಶತ್ರುಗಳು ಧ್ವಜ ಕಟ್ಟೆಗೆ ಹತ್ತಲು ಸಾಧ್ಯವಾಗುತ್ತಿರಲಿಲ್ಲ. ಧ್ವಜದ ವೇದಿಕೆಯ ಸುತ್ತಲೂ ಬಲವಾದ ಕೋಟೆಯನ್ನು ಕಟ್ಟಲಾಗಿದೆ. ಕಹಳೆ ಬತೇರಿಯಿಂದ ಇಲ್ಲಿಗೆ ನೇರವಾದ ವೀಕ್ಷಣಾ ಸಂಪರ್ಕವನ್ನು ಕಲ್ಪಿಸಲಾಗಿದೆ. ಝುಂಡಾ ಬತೇರಿಯ ಹಿಂಭಾಗದಲ್ಲಿ ೨ ಸುತ್ತಿನ ಕೋಟೆಯಿದೆ. ಈ ಕೋಟೆ ೨೦ ಅಡಿ ಎತ್ತರವಾಗಿದ್ದು, ರಕ್ಷಣಾ ದೃಷ್ಟಿಯಿಂದ ವಿಶೇಷವಾದ ತಾಂತ್ರಿಕತೆಯನ್ನು ಅಳವಡಿಸಲಾಗಿದೆ. ಸಿಹಿ ನೀರು ಹೊಂಡದ ಬತೇರಿಗೆ ವಿರುದ್ಧ ದಿಕ್ಕಿನಲ್ಲಿ ಅನೇಕ ಬುರುಜು ಬತೇರಿಗಳಿವೆ. ಕೋಟೆಯ ಉತ್ತರ ಹಾಗೂ ವಾಯವ್ಯ ಭಾಗವನ್ನು ಈ ಭಾಗದಿಂದಲೇ ವೀಕ್ಷಿಸಿ ಸಂಕೇತಗಳನ್ನು ಕಹಳೆ ಬತೇರಿಗೆ ಕೊಡುತ್ತಿದ್ದರು (ರಾಜಶೇಖರಪ್ಪ ೨೦೦೧:೬-೩೩).

ಚಿತ್ರದುರ್ಗ ಬೆಟ್ಟದ ಸುತ್ತಲೂ ಹಬ್ಬಿರುವ ಗುಡ್ಡದ ಸಾಲುಗಳು ಅಲ್ಲಲ್ಲಿ ಮೇಲೆದ್ದಿರುವ ಶಿಖರಗಳು ಚಿತ್ರದುರ್ಗ ರಕ್ಷಣಾ ಸಾಮರ್ಥ್ಯವನ್ನು ಹೆಚ್ಚಿಸಿ ಕೋಟೆಯಂತೆ ರಕ್ಷಿಸಿವೆ. ಇಲ್ಲಿನ ಬೆಟ್ಟಗುಡ್ಡಗಳಲ್ಲಿನ ಗೋಚರ ಹಾಗೂ ಅಗೋಚರ ಗುಹೆಗಳು, ಹಳ್ಳಕೊಳ್ಳಗಳು ಸಹಜವಾಗಿಯೇ ಪ್ರಾಚೀನ ಮಾನವನು ಇಲ್ಲಿ ನೆಲೆಸಲು ಸಹಕಾರಿಯಾಗಿದ್ದವೆಂದು ಹೇಳಬಹುದಾಗಿದೆ. ಚಿತ್ರದುರ್ಗ ಬೆಟ್ಟದಲ್ಲಿರುವ ನೂರಾರು ಗುಹೆಗಳು, ಹಾಗೂ ಗುಹೆಯಲ್ಲಿನ ವರ್ಣಚಿತ್ರಗಳು, ಬೆಟ್ಟದ ಪಶ್ಚಿಮದ ತಪ್ಪಲಿನಲ್ಲಿರುವ ಚಂದ್ರವಳ್ಳಿ ಪ್ರದೇಶಗಳಲ್ಲಿನ ಪ್ರಾಕ್ಚಾರಿತ್ರಿಕ ಅವಶೇಷಗಳು, ಪ್ರಾಚೀನ ಮಾನವ ನೆಲೆಯನ್ನು ದೃಢಪಡಿಸುತ್ತವೆ. ಚಂದ್ರವಳ್ಳಿ ಭೂ ಶೋಧನೆಯಲ್ಲಿ ಕಂಡುಬಂದ ತುಂಡುಗೋಡೆಗಳು ದಪ್ಪನಾದ ಇಟ್ಟಿಗೆಗಳು ಇಲ್ಲಿ ನಿರ್ಮಿತವಾಗಿದ್ದ ಕೋಟೆಗೆ ಸೇರಿದವೆಂದು ಊಹಿಸಲಾಗಿದೆ. ಸಾವಿರಾರು ವರ್ಷಗಳ ಹಿಂದೆ ಮಾನವನ ವಸತಿಯಾಗಿದ್ದ ಈ ಜಾಗವನ್ನು ಕ್ರಮೇಣ ದುರ್ಗಮ ಪ್ರದೇಶವನ್ನಾಗಿ ಮಾರ್ಪಡಿಸಿಕೊಂಡರೆಂದು ಹೇಳಬಹುದು. ಸಂಪದ್ಭರಿತವಾದ ಈ ಪ್ರದೇಶಕ್ಕೆ ಸಹಜವಾಗಿಯೇ ರಕ್ಷಣೆಯ ಅವಶ್ಯಕತೆ ಇತ್ತೆನ್ನಬಹುದಾಗಿದೆ. ಕಾಲಕ್ರಮೇಣ ನಾಗರೀಕತೆ ಬೆಳದಂತೆ ರಕ್ಷಣಾ ವಾಸ್ತುಶಿಲ್ಪವು ವಿಸ್ತಾರವಾಗುತ್ತಾ ಒಂದು ಐತಿಹಾಸಿಕ ಕಾಲದಲ್ಲಿ ಇಲ್ಲಿ ನಿರ್ಮಾಣಗೊಂಡಿರುವ ಅಬೇಧ್ಯವಾದ ಗಿರಿದುರ್ಗಕ್ಕೆ ಕಾರಣವಾಯಿತು.

ಯುದ್ಧತಂತ್ರ ಮತ್ತು ರಕ್ಷಣಾ ದೃಷ್ಟಿಯಿಂದ ನಿರ್ಮಿಸಿರುವ ಕೋಟೆಗಳು ಮಾನವನ ಜೀವನ ವಿಧಾನಕ್ಕೆ ಸಾಕ್ಷಿಯಾಗಿದೆ, ವಿಶಾಲ ಸಾಮ್ರಾಜ್ಯವನ್ನು ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದ್ದ ಕೋಟೆಗಳು ರಾಜ್ಯದ ಅವಿಭಾಜ್ಯ ಅಂಗಗಳಾಗಿದ್ದವು, ಇವು ಇತಿಹಾಸದ ಸಾಂಸ್ಕೃತಿಕ ಸ್ಮಾರಕಗಳು ಹೌದು, ಇವು ನಮ್ಮನ್ನು ನಮ್ಮ ಸಂಸ್ಕೃತಿಯನ್ನು ರಕ್ಷಿಸಿದ್ದವಲ್ಲದೆ. ಇತಿಹಾಸದ ರಚನೆಗೆ ಪ್ರಮುಖ ಪುರಾತತ್ವ ಆಕರಗಳಾಗಿವೆ. ಚಿತ್ರದುರ್ಗದ ಸಾಂಸ್ಕೃತಿಕ ಇತಿಹಾಸದ ಕೊಂಡಿಯಾಗಿರುವ ಇಂತಹ ಕೋಟೆ ಕೊತ್ತಲುಗಳು ಪ್ರಾಚೀನ ಸ್ಮಾರಕಗಳಾಗಿ ವಿನಾಶದ ಅಂಚನ್ನು ತಲುಪಿವೆಯಲ್ಲದೆ. ಇತಿಹಾಸದ ಮೂಕ ಸಾಕ್ಷಿಗಳಾಗಿ ನಿಂತಿವೆ. ಬದಲಾದ ರಾಜಕೀಯ ಸನ್ನಿವೇಶ, ಯುದ್ಧ ನೀತಿ, ಪ್ರಕೃತಿ ವಿಕೋಪ ಹಾಗೂ ಮನುಷ್ಯನ ಸ್ವಾರ್ಥ ಜೀವನದ ಹಿಡಿತಕ್ಕೆ ಸಿಕ್ಕಿ ಹೇಳ ಹೆಸರಿಲ್ಲದೆ ಕಣ್ಮರೆಯಾಗುವುದರೊಂದಿಗೆ ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತವೆ. ಇಂತಹ ಅಪೂರ್ವ ಸ್ಮಾರಕಗಳ ಹಿಂದೆ ಅದೆಷ್ಟೋ ಇತಿಹಾಸವು ಅಡಗಿದೆ.

ಕೋಟೆಯ ಜೊತೆಗೆ ಇತರೆ ಸ್ಮಾರಕಗಳಾದ ದೇವಾಲಯಗಳು, ಬತೇರಿಗಳು ಸಹ ದಾಳನ ಕೈಗೆ ಸಿಕ್ಕಿ ಅವಸಾನದ ಅಂಚನ್ನು ತಲುಪುತ್ತಿವೆ. ಆದ್ದರಿಂದ ಇವುಗಳ ಅಧ್ಯಯನವು ಸಹ ಬಹುಮುಖ್ಯವಾದದ್ದು ಎಂಬುದಾಗಿಯೂ ಈ ಒಂದು ಸಂದರ್ಭದಲ್ಲಿ ಹೇಳಬಹುದಾಗಿದೆ. ಜೊತೆಗೆ ತಾ.ರಾ.ಸು., ಬಿ.ಎಲ್.ವೇಣು, ಗಿರಿಜ ಟಿ., ಲಕ್ಷ್ಮಣ್ ತೆಲಗಾವಿ ಇನ್ನು ಮುಂತಾದ ಅನೇಕ ಬರಹಗಾರರು ಮತ್ತು ವಿದ್ವಾಂಸರ ಕೊಡುಗೆ ಮಹತ್ವದೆನಿಸಿದೆ.

**ಟಿಪ್ಪಣಿಗಳು**

೧. ಒಬ್ಬ ಮನುಷ್ಯನು ಆರೋಗ್ಯ ಮತ್ತು ದಷ್ಟಪುಷ್ಟವಾಗಿದ್ದಾನೆ ಎಂಬುದಕ್ಕೆ ಅವನು ಹೊಂದಿರುವ ಎಲ್ಲ ಅಂಗಗಳು ಕ್ರಿಯಾಶೀಲತೆಯಿಂದ ಕೆಲಸ ನಿರ್ವಹಿಸುತ್ತಿರಬೇಕಾಗುತ್ತದೆ. ಅದರಂತೆ ಕೋಟೆಯೊಳಗೆ ಇತರೆ ಅವಶೇಷಗಳು ಹೊಂದಿ ಅವುಗಳು ತಮ್ಮದೇ ಆದ ಕಾರ್ಯವನ್ನು ನಿರ್ವಹಿಸುತ್ತಿರಬೇಕಾಗುತ್ತದೆ. ಅದರಲ್ಲಿ ಬುರುಜುಗಳು, ಕಂದಕಗಳು, ಕಾವಲುಗೋಪುರಗಳು, ಗರಡಿಮನೆಗಳು, ಮದ್ದಿನಮನೆ, ಕಣಜಗಳು, ಸೈನಿಕರ ವಸತಿ ನಿಲಯಗಳು, ದೇವಾಲಯಗಳು ಪಂಚಭೂತಗಳಲ್ಲಿ ಒಂದಾದ ನೀರಿನ ವ್ಯವಸ್ಥೆಯು ಬಹುಮುಖ್ಯ ಪಾತ್ರವನ್ನೇ ನಿರ್ವಹಿಸ ಬೇಕಾಗುತ್ತದೆ. ಇಲ್ಲವಾದಲ್ಲಿ ಆಡಳಿತಕ್ಕೆ ಅಡ್ಡಿಯುಂಟಾಗುತ್ತದೆ. ಇದರಿಂದ ಕೋಟೆಯೊಂದೆ ಇರದೆ ಈ ಮೇಲಿನ ಎಲ್ಲ ಅಂಶಗಳು ನಾಡಿನ ಜನತೆಗೆ, ಸೈನಿಕರಿಗೆ, ರಾಜನಿಗೆ ಪ್ರತ್ಯಕ್ಷ್ಯ ಹಾಗೂ ಪರೋಕ್ಷವಾಗಿ ಸಹಕಾರಿಯಾಗಿ ಕಾರ್ಯ ನಿರ್ವಹಿಸುತ್ತವೆ.

ಉದಾ: ಬತೇರಿಗಳು ಇವು ಕೋಟೆಯ ಹೊರಭಾಗದಲ್ಲಿ ಸುತ್ತಲೂ ಕೋಟೆಯನ್ನು ಆವರಿಸಿಕೊಂಡಿದ್ದು ಇದರಲ್ಲಿ ಹೆಚ್ಚಿನದಾಗಿ ನೀರು ತುಂಬಿದ್ದು, ವಿಷಪೂರಿತ ಹಾವು ಮತ್ತು ಮೊಸಳೆಗಳನ್ನು ಬಿಟ್ಟಿರುವುದರಿಂದ ಶತ್ರುಸೈನ್ಯವು ಬಹುಬೇಗನೆ ಕೋಟೆಯೊಳಗೆ ನುಸುಳಲು ಸಾಧ್ಯವಾಗುವುದಿಲ್ಲ. ಹಾಗೂ ಗರಡಿಮನೆಗಳನ್ನೇ ತೆಗೆದುಕೊಂಡರು ಕೇವಲ ಸೈನಿಕರು ಮಾತ್ರ ಇದ್ದರೆ ಸಾಲದು. ಅವರಿಗೆ ಉತ್ತಮವಾದ ತರಬೇತಿಯನ್ನು ನೀಡಿರಬೇಕಾಗುತ್ತದೆ. ಇಲ್ಲವಾದರೆ ದೆಹಲಿ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿಯು ರಜಪೂತ ರಾಣಾಪ್ರತಾಪಸಿಂಗ್‌ನ ಎರಡರಷ್ಟು ಸೈನ್ಯವನ್ನು ಸೋಲಿಸಿದಂತೆ ಈ ನಾಡಿನ ಜನರು ಇದೇ ಫಲವನ್ನು ಪಡೆಯಬೇಕಾಗಿದ್ದಿತು. ಆದ್ದರಿಂದ ಕೋಟೆಯೊಳಗಿರುವ ಗರಡಿಮನೆಯ ಸೈನಿಕರಿಗೆ ಯುದ್ಧವಿದ್ಯೆ, ಮಲ್ಲವಿದ್ಯೆ, ಕತ್ತಿವರಸೆ, ಕುದುರೆ ಸವಾರಿ, ಪೈಲ್ವಾನ್/ಜಟ್ಟಿಗಳನ್ನು ತಯಾರು ಮಾಡುವ ಸ್ಥಳವಾಗಿರುತ್ತಿದ್ದಿತು. ಹೀಗೆ ಕೋಟೆಯೊಳಗೆ ಕಾಣುವ ಅವಶೇಷಗಳು ಕೋಟೆಯಷ್ಟೇ ರಾಜನಿಗೆ ಆಸರೆಯನ್ನು ನೀಡುವ ಅಂಶಗಳಾಗಿ ಕಾಣಬರುತ್ತವೆ. ಬತೇರಿಗಳು, ಸೈನಿಕರ ವಸತಿನಿಲಯಗಳು ಇಲ್ಲಿ ಕಾಣುವುದರಿಂದ ಶತ್ರುಸೈನ್ಯವನ್ನು ಬಹುಬೇಗನೆ ಪತ್ತೆ ಹಚ್ಚಬಹುದಿದ್ದಿತು. ಇವರಿಂದ ಶತ್ರು ಸೈನ್ಯದ ಬಾಯಿಂದ ಕೋಟೆಯನ್ನು ರಕ್ಷಿಸಿದಂತಾಗುತ್ತಿದ್ದಿತು. ಈ ರೀತಿಯಾಗಿ ಪ್ರತಿಯೊಂದು ಅವಶೇಷವು ಕೆಲಸ ನಿರ್ವಹಿಸುತ್ತಿದ್ದವು (ತೆಲಗಾವಿ ವೆಂಕಣ್ಣಾಚಾರ್ ೧೯೮೦:೯೧).

೨. ನಾವು ಕಂಡಂತೆ ಇತಿಹಾಸದ ಹಲವು ಮುಖಗಳಲ್ಲಿ ಯುದ್ಧವಷ್ಟೇ ಅಲ್ಲದೇ ತಂತ್ರಗಾರಿಕೆಯು ಯಶಸ್ಸಿಗೆ ಕಾರಣವಾಗುತ್ತಿದ್ದಿತು. ಇದು ಕೇವಲ ಯುದ್ಧ ರಂಗದಲ್ಲಿ ಮಾತ್ರವಲ್ಲದೆ, ತಾವು ವಾಸಿಸುವ ಸ್ಥಳವನ್ನು ಈ ರೀತಿಯ ಏರ್ಪಾಟನ್ನು ಮಾಡಿಕೊಂಡಿರಬೇಕಾಗುತ್ತದೆ. ಇಂತಹ

ವ್ಯವಸ್ಥೆಯು ಚಿತ್ರದುರ್ಗದ ಕೋಟೆಯಲ್ಲಿ ಕಂಡುಬಂದಿದ್ದು, ಅದೆಂದರೆ ಫಲ್ಗುಣೇಶ್ವರ ದೇವಾಲಯದ ಸಮೀಪದಲ್ಲಿ ದಿಡ್ಡಿ ಬಾಗಿಲು ಮುಂಭಾಗದಲ್ಲಿ ಭಾರೀ ಗುಂಡೋಂದರ ಕೆಳಗೆ ನೆಲವನ್ನು ಅಗೆದು ಸುಂದರವಾದ ಗವಿಯಾಕಾರದಲ್ಲಿ ನಿರ್ಮಿಸಲಾಗಿದ್ದು, ಈ ಗವಿಯಲ್ಲಿದ್ದ ಸೈನಿಕರೆ ಇದರ ಪಕ್ಕದಲ್ಲೇ ಇದ್ದು ಬಾಗಿಲು ಹಾಗೂ ಕೋಟೆಯನ್ನು ಕಾಯುತ್ತಿದ್ದರು. ಈ ರೀತಿಯ ಗವಿಗಳಿಗೆ ಎಂತಹ ಫಿರಂಗಿ ಗುಂಡುಗಳಿಂದ ಬಂದೂಕುಗಳಿಂದ ಹೊಡೆದರೂ ಯಾವುದೇ ಅಪಾಯವಿರುತ್ತಿರಲಿಲ್ಲ. ಇನ್ನು ಕೆಲವು ಕಡೆ ಬಾಗಿರುವ ಕೋಡು ಕಲ್ಲುಗಳನ್ನು ಬಳಸಿ ವಸತಿಯನ್ನಾಗಿ ಮಾರ್ಪಾಡಿಸಿಕೊಂಡಿದ್ದಾರೆ. ಹಾಗೂ ಕೆಲವು ಕಡೆ ಒಂದು ಬಾಗಿಲಿನಿಂದ ಪ್ರವೇಶ ಮಾಡಿದರೆ ಮತ್ತೊಂದು ಬಾಗಿಲಿನಿಂದ ಹೊರಹೋಗುವಂತೆ ಸೈನಿಕರ ನೆಲೆಗಳು ಕಂಡುಬಂದಿವೆ. ಈ ತಂತ್ರಗಾರಿಕೆಯು ಎಂತಹ ಬಲಿಷ್ಠವಾದ ಶತ್ರುಸೈನ್ಯಕ್ಕೆ ಸುಲಭವಾಗಿ ಸಿಗದಂತೆ ತಪ್ಪಿಸಿಕೊಳ್ಳುವಂತಹ ವ್ಯವಸ್ಥೆಯು ಈ ತರಹದ ಬಾಗಿಲುಗಳ ಸಹಾಯದ ಮೂಲಕ ಆಗುತ್ತಿದ್ದಿತು. ಇದರಿಂದ ಶತ್ರುಸೈನ್ಯ ದಾಳಿಮಾಡಿದರೂ ಅವರಿಗೆ ಕಣ್ಣುತಪ್ಪಿಸಿ ಹೊರಹೋಗಬಹುದಿತ್ತು. ಕೆಲವೊಮ್ಮೆ ಕೋಟೆಯನ್ನು ಕಾಪಾಡಬಹುದಿತ್ತು. ಇಂತಹ ತಂತ್ರಜ್ಞಾನವು ಮೊಲ ಮತ್ತು ಸಿಂಹದ ಕಥೆಯನ್ನು ನೆನಪಿಗೆ ತರುತ್ತದೆ (ದುರ್ಗಸಿಂಹನ ಪಂಚತಂತ್ರ).

## ಪಾಳೆಯಗಾರರ ಕುರಿತ ಐತಿಹ್ಯಗಳು

ವಿಜಯನಗರದ ಅರಸರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಪಾಳೆಯಪಟ್ಟುಗಳಲ್ಲಿ ಚಿತ್ರದುರ್ಗವು ಪ್ರಮುಖವಾದುದಾಗಿದೆ. ಚಿತ್ರದುರ್ಗದ ಸರಹದ್ದಿನಲ್ಲಿ ಹರಪನಹಳ್ಳಿ ನಿಡಗಲ್ಲು, ರಾಯದುರ್ಗ, ಮತ್ತೋಡು, ತರೀಕೆರೆ, ಬಿದನೂರು ಮುಂತಾದ ಕಡೆ ಅನೇಕ ಪಾಳೆಯಪಟ್ಟುಗಳಿದ್ದವು. ವಿಜಯನಗರದ ಅರಸರಿಗೆ ಕಪ್ಪಕಾಣಿಕೆಗಳನ್ನು ಕೊಟ್ಟುಕೊಂಡು ಇದ್ದ ಇವರು ವಿಜಯನಗರ ಪತನಾನಂತರ ತಮ್ಮನ್ನು ಸ್ವತಂತ್ರರೆಂದು ಘೋಷಿಸಿಕೊಂಡರು. ಸಣ್ಣಪುಟ್ಟ ಪಾಳೆಯಪಟ್ಟುಗಳಿಗೆ ಮಗ್ಗಲು ಮುಳ್ಳಾಗಿದ್ದ ಚಿತ್ರದುರ್ಗದ ಮೇಲೆ ಎಲ್ಲಾ ಪ್ರಾಂತ್ಯಗಳ ಪಾಳೆಯಗಾರರ ಕಣ್ಣು ಬಿದ್ದಿತು. ಹೀಗಾಗಿ ಮನುಷ್ಯರ ಸಹಜ ಗುಣವಾದ ಅಸೂಯೆಯಿಂದ ಈ ಪಾಳೆಯಪಟ್ಟುಗಳಲ್ಲಿ ಆಗಾಗ್ಗೆ ಘರ್ಷಣೆಗಳು ಸಂಭವಿಸುತ್ತಲೇ ಇದ್ದವು. ನೆರೆಯ ಪಾಳೆಯಗಾರರಿಗೆ ಸಿಂಹಸ್ವಪ್ನವಾಗಿದ್ದ ಚಿತ್ರದುರ್ಗದ ನಾಯಕರ ಸಾಹಸ, ಪರಾಕ್ರಮ, ಶೌರ್ಯ, ಇತರೆಯವರ ಎದೆ ನಡಗಿಸುವಂತಿದ್ದಿತ್ತು.

ಮತ್ತೊಂದು ಐತಿಹ್ಯವೆಂದರೆ ಚಿತ್ರದುರ್ಗದ ಪಾಳೆಯಗಾರರ ಮೂಲನಿವಾಸಿಗಳು ಆಂಧ್ರದ ಮದ್ದಿಕೆರೆ ಗ್ರಾಮದಿಂದ ಬಂದಿರಬಹುದಾದ್ದರಿಂದ ಆ ಮೂಲಸ್ಥಳದ ನೆನಪಿಗಾಗಿ ಆ ಗ್ರಾಮಕ್ಕೆ ಮದ್ದಿಕೆರೆ, ಮೆದಿಕರ, ಮೆದಕೇರಿ ಎಂಬ ವ್ಯಕ್ತಿನಾಮ ಸೇರಿಸಿ ಮೆದಕೇರಿನಾಯಕ ಎಂದು ಬಳಸಿರುವ ಸಾಧ್ಯತೆಯೇ ಹೆಚ್ಚಾಗಿ ಕಂಡುಬರುತ್ತದೆ. ಆದ್ದರಿಂದ ಈ ವಂಶದ ಮೂಲ ನಾಮದ ಬಗ್ಗೆ ವಿದ್ವಾಂಸರಲ್ಲಿ ಇನ್ನೂ ಭಿನ್ನಾಭಿಪ್ರಾಯಗಳಿವೆ.

"ಗಂಡು ಮೆಟ್ಟಿದ ನಾಡು" ಎಂಬುದಾಗಿ ಕರೆಸಿಕೊಂಡ ಚಿತ್ರದುರ್ಗವನ್ನು ಸು. ೨೧೧ ವರ್ಷಗಳ (೧೫೬೮-೧೭೭೯) ಕಾಲ ಆಳಿದಂತಹ ಅರಸರನ್ನು ನಾಯಕರು ಅಥವಾ

ಪಾಳೆಯಗಾರರು ಮದಕರಿನಾಯಕ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಹೆಚ್ಚಿನದಾಗಿ ಬಳಕೆಯಲ್ಲಿರುವ ಶಬ್ಧವೆಂದರೆ 'ಮದಕರಿ' ಎಂಬುದಾಗಿದೆ. ಈ ಅರಸರುಗಳಿಗೆ ಮದಕರಿ ಎಂಬುದಾಗಿ ಹೆಸರು ಬರಲಿಕ್ಕೆ ಬಹಳಷ್ಟು ಐತಿಹ್ಯಗಳಿವೆ. ಜೊತೆಗೆ ಈ ಅಧ್ಯಯನಕ್ಕೆ ಬರಹಗಾರರಾದ ಲಕ್ಷ್ಮಣ್ ತೆಲಗಾವಿ (೨೦೧೦), ಗೋವಿಂದರಾಜು ಸಿ.ಆರ್. (೨೦೦೪), ಸದಾನಂದ (೨೦೦೬), ಲಕ್ಷ್ಮಣ್ ತೆಲಗಾವಿ (೨೦೦೯), ವೆಂಕಟೇಶಯ್ಯ (೧೯೭೧), ಸೂರ್ಯನಾರಾಯಣ (೧೯೩೩), ಶಂಕರ, ವೆಂಕಣ್ಣಾಚಾರ್, ಹುಲ್ಲೂರು ಶ್ರೀನಿವಾಸ ಜೋಯಿಸ್ (೧೯೮೪), ಶ್ರೀನಿವಾಸ ನಾಯಕ (೧೯೮೪), ಲಕ್ಷ್ಮಣ್ ತೆಲಗಾವಿ (೨೦೦೬), ಗಂಡುಗಲಿ (೧೯೯೫), ಗಿರಿಜ ಟಿ. (೧೯೯೧), ಪುಟ್ಟಣ್ಣ ಎಂ.ಎಸ್. (೧೯೨೪), ಪ್ರಭಾಕರ (೧೯೯೯), ರಾಜಶೇಖರಪ್ಪ ಬಿ. (೧೯೯೮), ಲಕ್ಷ್ಮಣ್ ತೆಲಗಾವಿ (೧೯೭೮), ವಸು ಎಂ.ವಿ. (೨೦೦೧), ವಿರೂಪಾಕ್ಷಿ ಪೂಜಾರಹಳ್ಳಿ (೨೦೦೨), ತಿಪ್ಪೇಸ್ವಾಮಿ ಎಂ.ಎಸ್. (೨೦೦೪), ಕೃಷ್ಣಮೂರ್ತಿ ಹನೂರು (೧೯೯೫), ಕಲಬುರ್ಗಿ ಎಂ.ಎಂ. (೧೯೯೪), ಶ್ರೀನಿವಾಸ ಎಂ.ವಿ. (೧೯೭೬), ಶೈಲಜಾ ಹೊಸಹಳ್ಳೇರ (೨೦೦೧), ಶಕುಂತಲ ಎನ್. (೨೦೦೯), ಆಂಜನೇಯ ಸಿ. (೧೯೮೯), ರಾಜಶೇಖರಪ್ಪ ಬಿ., ಮೀರಸಾಬಿಹಳ್ಳಿ ಶಿವಣ್ಣ (೧೯೯೯), ಪುಟ್ಟಣ್ಣ ಎಂ.ಎಸ್. (೧೯೯೭), ಸ್ಟೀವನ್ ಕ್ವಾಡ್ರಸ್ (೨೦೦೫) ಹಾಗೂ ರಂಗಸಾಮಯ್ಯ, ಷೇಕ್ ಅಲಿ ಬಿ. (೨೦೦೧) ಮುಂತಾದವರುಗಳ ಬರಹ ಮತ್ತು ಕೃತಿಗಳನ್ನು ಬಳಸಿಕೊಂಡು ನಾಯಕರ ಐತಿಹ್ಯ ಮತ್ತು ಸಾಧನೆಯನ್ನು ತಿಳಿಸಲು ಪ್ರಯತ್ನಿಸಲಾಗಿದೆ.

ಸ್ಥಳೀಯ ಐತಿಹ್ಯದ ಪ್ರಕಾರ ಈ ಪಾಳೆಯಗಾರರೆಲ್ಲರು ನಾಯಕ ಜನಾಂಗದ (ಮ್ಯಾಸನಾಯಕರು)ಲ್ಲಿ ಕಾಮಗೇತಿ ವಂಶಸ್ಥರು ಎಂಬ ಐತಿಹ್ಯಗಳು ದೊರಕಿವೆ (ಗಿರಿಜ ೧೯೯೧:೧೧:೧೬).

ಚಿತ್ರದುರ್ಗದ ಪಾಳೆಯಗಾರರ ಮೂಲಪುರುಷ **ಚಿತ್ರನಾಯಕ**. ಕೆಲವು ಇತಿಹಾಸಕಾರರ ಪ್ರಕಾರ ಚಿತ್ರದುರ್ಗದ ಪಾಳೆಯಗಾರರ ಮೂಲ ಪುರುಷನೆನಿಸಿಕೊಂಡ ಚಿತ್ರನಾಯಕ ಒಮ್ಮೆ ದೆಹಲಿಗೆ ಹೋದನಂತೆ. ಆಗ ಅಲ್ಲಿ ಆಳುತ್ತಿದ್ದವ ತೊಘಲಕ ಸಂತತಿಯ ಸುಲ್ತಾನ. ಒಂದು ದಿನ ಸುಲ್ತಾನನ ಪಟ್ಟದಾನೆಗೆ ಮದವೇರಿ ಅದು ಅಪಾಯಕ ರೀತಿಯಲ್ಲಿ ರಾಜಬೀದಿಯಲ್ಲಿ ನುಗ್ಗಿತಂತೆ. ಅದನ್ನು ನಿಯಂತ್ರಿಸುವುದು ಯಾರಿಗೂ ಅಸಾಧ್ಯವಾದಾಗ ಚಿತ್ರನಾಯಕ ತನ್ನ ಧೈರ್ಯ, ಸಾಹಸ, ಜಾಣ್ಮೆಯಿಂದ ಆ ಮದ್ದಾನೆಯನ್ನು ಹಿಡಿದು ಮದ ಇಳಿಸಿದನಂತೆ. ಇಂತಹ ಸಾಹಸ ಕಾರ್ಯಕ್ಕೆ ಮೆಚ್ಚಿದ ಸುಲ್ತಾನನು ನಾಯಕನಿಗೆ ಬಹುಮಾನಗಳನ್ನಿತ್ತು ಮದಿಸಿದ ಕರಿಯನ್ನು ಪಳಗಿಸಿದ ಇವನಿಗೆ 'ಮದಕರಿ' ಎಂಬ ಬಿರುದನ್ನು ನೀಡಿ ಗೌರವಿಸಿದನಂತೆ. ಈ ನಾಯಕನ ನಂತರದ ಪಾಳೆಯಗಾರರು ತಮ್ಮ ಹೆಸರಿನೊಂದಿಗೆ ಮದಕರಿ ನಾಯಕ ಎಂಬ ಬಿರುದನ್ನು ಸೇರಿಸಿಕೊಳ್ಳತೊಡಗಿದರು (ಪ್ರಭಾಕರ ೧೯೯೧:೧–೬೭). ಆದರೆ ಪಾಳೆಯಗಾರರ

ಬಗ್ಗೆ ನಿರ್ದಿಷ್ಟ ದಾಖಲೆಗಳು ಸಿಗುವುದು. ಮತ್ತಿ **ತಿಮ್ಮಣ್ಣನಾಯಕ**ನಿಂದ ಈತನ ಸ್ಥಳ ದಾವಣಗೆರೆ ತಾಲ್ಲೂಕಿನ ಮತ್ತಿಗ್ರಾಮ ಈತ ವಿಜಯನಗರದರಸರ ಬಳಿ ಅಧಿಕಾರಿಯಾಗಿದ್ದು, ಇವನ ದಕ್ಷತೆಗೆ ಮೆಚ್ಚಿದ್ದರಿಂದ ಹೊಳಲ್ಕೆರೆ ಪ್ರದೇಶದ ಅಮರಮಾಗಣಿ ಪಡೆದು ಅಧಿಕಾರಿಯಾದ ನಂತರ ಹಿರಿಯೂರಿನ ಅಧಿಕಾರಿಯಾಗಿ ಮುಂದೆ ಚಿತ್ರದುರ್ಗದ ಪಾಳೆಯಗಾರನೆನಿಸಿದ, ಈತನು ದುರ್ಗದ ಬೆಟ್ಟದ ಮೇಲಿನ ಹಳೆಯ ಕೋಟೆಯನ್ನು ಕೆಡವಿಸಿ ಪುನರ್ ನಿರ್ಮಾಣ ಮಾಡಿದ ಈತ ಅತ್ಯಂತ ಪರಾಕ್ರಮಿ ಚಿತ್ರದುರ್ಗದ ಸ್ಥಾಪಕನಾದ ದುರ್ಗದ ಪಾಳೆಗಾರ 'ಏಕಲವ್ಯ'ನೆಂದು ಕರೆಸಿಕೊಂಡ 'ತಿಮ್ಮಣ್ಣ ನಾಯಕನು' ಪ್ರಬಲಿಸುತ್ತಿರುವ ಸುದ್ಧಿಯನ್ನು ಕೇಳಿ ವಿಜಯನಗರದ ಅರಸರು ಇವನನ್ನು ಮಟ್ಟ ಹಾಕಲು ವೀರಸಾಳೋ ನರಸಿಂಗನಾಯಕ ಎಂಬುವವನನ್ನು ಕಳುಹಿಸಿಕೊಟ್ಟನು. ಆಗ ತಿಮ್ಮಣ್ಣ ನಾಯಕನು ಅವನ ಖಾಸಾ ಕುದುರೆಯನ್ನು ಅವನಿಗೆ ಗೊತ್ತಾಗದಂತೆ ಹಾರಿಸಿಕೊಂಡು ಬರಬೇಕೆಂದು ಅವನ ಲಾಯಕ್ಕೆ ಹೋಗುತ್ತಾನೆ. ಆಗ ಕುದುರೆಯು ಗಾಬರಿಯಾಗಿ ಹೇಷರವ ಮಾಡಿದಾಗ ಕಾವಲುಗಾರ ಎದ್ದು ನೋಡುವಲ್ಲಿ ತಿಮ್ಮಣ್ಣ ನಾಯಕನು ಅಲ್ಲೆ ಪಕ್ಕದಲ್ಲಿದ್ದ ಹುಲ್ಲಿನಲ್ಲಿ ಅವಿತುಕೊಂಡ. ಕಾವಲುಗಾರ ಸಡಿಲವಾಗಿದ್ದ ಗೂಟವನ್ನು ಕಿತ್ತು ಅಲ್ಲೇ ಹುಲ್ಲಿನಲ್ಲಿ ಕಾಣದಂತೆ ಬಡಿಯುತ್ತಾನೆ. ದೊರೆ ನೋವು ಅನುಭವಿಸುತ್ತಿದ್ದರು ಶಬ್ಧ ಮಾಡಲಿಲ್ಲ. ನಂತರ ಚಾಕುವಿನಿಂದ ತನ್ನ ಹಸ್ತವನ್ನೇ ತುಂಡುರಿಸಿಕೊಂಡು ಕುದುರೆಯನ್ನು ತರುತ್ತಾನೆ (ವೆಂಕಟೇಶಯ್ಯ ೧೯೭೧:೧೭-೨೧). ಅವರು ಗೂಟದಲ್ಲಿ ಸಿಕ್ಕಿಕೊಂಡ ತುಂಡು ಹಸ್ತವನ್ನು ನೋಡಿ ಅವನ ಪರಾಕ್ರಮದಲ್ಲಿ ತಲೆದೂಗುತ್ತಾನೆ. ಹಾಗೂ ಇವರ ಮತ್ತೊಂದು ಸಾಹಸವೆಂದರೆ ತಿಮ್ಮಣ್ಣ ನಾಯಕ ಕರವರತಿಸರಕ್ಕೆ ನೀರು ಕುಡಿಯಲು ಬಂದ ಮದಿಸಿದ ಆನೆಯನ್ನು ಕಾಲಿನಿಂದ ಬಿಲ್ಲು ಸಿಕ್ಕಿಸಿಕೊಂಡು ಅದರ ಹಣೆಗೆ ಬಾಣ ಪ್ರಯೋಗ ಮಾಡಿ ಸಾಹಿಸುತ್ತಾನೆ. ಆಗ ವಿಜಯನಗರದ ಅರಸರು ತಿಮ್ಮಣ್ಣ ನಾಯಕನನ್ನು 'ಮದಕರಿ' ಎಂಬ ಬಿರುದಿನೊಂದಿಗೆ ಗೌರವಿಸುತ್ತಾರೆ ಎಂಬುದು ಐತಿಹ್ಯವಿದೆ. ಹಾಗೂ ಈತನಿಗೆ "ಹಗಲು ಕೊಗ್ಗಲೆಯ ಮಾನ್ಯ" ಎಂಬ ಬಿರುದಿದ್ದಿತ್ತು. **ಓಬಣ್ಣನಾಯಕ** ಈತನು ಗಡ್ಡ ಬಿಟ್ಟಿದ್ದರಿಂದ 'ಗಡ್ಡದ ಮದಕರಿನಾಯಕನೆಂದು' ಏಕನಾಥೇಶ್ವರಿಗೆ ಮೊಸರನ್ನ ನೈವೇಧ್ಯ ಏರ್ಪಾಟು ಮಾಡಿದ್ದರಿಂದ 'ದಧ್ಯಾನ್ನದ ಓಬಣ್ಣನಾಯಕನೆಂದು' ಹೆಸರಾಗಿದ್ದ ಈತ ಮತ್ತಿ ತಿಮ್ಮಣ್ಣನಾಯಕನ ನಂತರ ಆಳಿದವನು. ಈತನಿಗೆ ಸಿದ್ಧರ ದರ್ಶನವಾಗಿ ಅವರಿಂದ ಕಬ್ಬಿಣವನ್ನು ಚಿನ್ನವನ್ನಾಗಿಸುವ ಸಿದ್ಧರಸ ಪ್ರಾಪ್ತವಾಗಿದ್ದಿತಂತೆ. ಈತ ಮಹಾಪರಾಕ್ರಮಿ, ಧೈರ್ಯಶಾಲಿ ಹಾಗೂ ದೈವ ಭಕ್ತನೂ ಆಗಿದ್ದನು. ಈತನ ಕಾಲದಲ್ಲೇ ಚಿತ್ರದುರ್ಗ ಸ್ವತಂತ್ರ ಪಾಳೆಯ ಪಟ್ಟವೆನಿಸಿತ್ತು. ೧೫೮೮-೧೬೦೨ರವರೆಗೆ ಆಳಿದ ಇವನಿಗೆ ಒಂದನೇ ಮದಕರಿನಾಯಕ ಎನ್ನುತ್ತಾರೆ. **ಕಸ್ತೂರಿ ರಂಗಪ್ಪನಾಯಕ** ಕ್ರಿ.ಶ.೧೬೦೩-೧೬೫೨ರವರೆಗೆ ಆಳಿದ ಕಸ್ತೂರಿ ರಂಗಪ್ಪ ನಾಯಕರು ಗಡ್ಡದ ಮದಕರಿನಾಯಕನ

ಮಗ ಈತನ ಕಾಲದಲ್ಲಿ ಬಸವ ಪಟ್ಟಣದ ಪಾಳೆಯಗಾರರೊಂದಿಗೆ ಆಗಾಗ ಯುದ್ಧ ನಡೆದವು. ಮಾಯಕೊಂಡ, ಜಗಲೂರು, ಸಂತೇಬೆನ್ನೂರು, ಅಣಜಿ, ಮುಂತಾದವುಗಳನ್ನು ಗೆದ್ದು ತನ್ನ ಪಾಳೆಯ ಯುದ್ಧವಾಗಿ ಶರಣಾಗತನಾದ ಅಂಚಪ್ಪನಾಯಕನ ನಾಗತಿಯನ್ನು ಕಾಪಾಡಿದ ಹೆಗ್ಗಳಿಕೆಗೆ ಪಾತ್ರನಾಗಿದ್ದು, ಈತನ ಕಾಲದಲ್ಲಿ ರಾಜ್ಯದ ಆದಾಯ ಅತ್ಯಂತ ಅಭಿವೃದ್ಧಿ ಹೊಂದಿದ್ದಿತು ಎಂಬುದನ್ನು ಸ್ಥಳೀಯರ ಹೇಳಿಕೆಯ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಇಮ್ಮಡಿ ಮದಕರಿನಾಯಕ,** ಕ್ರಿ.ಶ. ೧೬೫೨ರಲ್ಲಿ ಅಧಿಪತಿಯಾದ ಮದಕರಿ ನಾಯಕನು ಕಸ್ತೂರಿ ರಂಗಪ್ಪನಾಯಕನ ಮಗ ೧೬೭೪ರವರೆಗೆ ಅತ್ಯಂತ ದಕ್ಷತೆಯಿಂದ ಆಳಿ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡು ರಾಜ್ಯ ವಿಸ್ತರಿಸಿ ಆದಾಯವನ್ನು ೧೦ ಲಕ್ಷ ದುರ್ಗಿವರಹ ಗಳಿಗೇರಿಸಿದ್ದಾನೆಂದು ಹೇಳಲಾಗಿದೆ. 'ಇಮ್ಮಡಿ ಮದಕರಿ ನಾಯಕನಿಗೆ ಮಕ್ಕಳಿಲ್ಲದ್ದರಿಂದ **ಓಬಣ್ಣನಾಯಕ** ಎನ್ನುವನು ದತ್ತುಪುತ್ರನಾಗಿ ಪಟ್ಟಕ್ಕೆ ಬಂದನು. ಆದರೆ ಇವನು ದಕ್ಷ ಆಡಳಿತಗಾರನಾಗಿದ್ದರಿಂದ ದುರ್ಗವು ಅಂತಃಕಲಹಗಳ ಸಂತೆಯಾಗಿ ದುರ್ಗದ ದಿಂಡಿನ ದಳವಾಯಿಗಳು ದಂಗೆಯೆದ್ದರು. ತನ್ನ ಕ್ರೂರತನದಿಂದ ರಕ್ತವನ್ನೇ ಹರಿಸಿ ಓಬಣ್ಣನಾಯಕನನ್ನು ಕೊಂದನು. ಈತನ ನಂತರ ದೊಣ್ಣೆರಂಗಪ್ಪ ನಾಯಕ ಎಂಬುವನು ಆಡಳಿತಕ್ಕೆ ಬಂದನು. ಈತನು ಪಾಳೆಯಗಾರರ ಸೋದರ ಸಂಬಂಧಿ. ಈತನ ಆಳ್ವಿಕೆಯು ಅತ್ಯಂತ ಹೀನಾಯವಾಗಿದ್ದು, ದಳವಾಯಿಗಳು ದಂಗೆಯೆದ್ದರು ಹಾಗೂ ಇವನನ್ನು ಕೊಂದುಹಾಕಿದರಂತೆ. ಇವನ ನಂತರ **ಚಿಕ್ಕಣ್ಣನಾಯಕ** ಎಂಬುವನು ೧೨ ವರ್ಷಗಳ ಕಾಲ ಆಳ್ವಿಕೆ ಮಾಡಿದ್ದು ಈತನ ಕಾಲದಲ್ಲಿ ದುರ್ಗ ದಳವಾಯಿಗಳ ಹಿಡಿತದಲ್ಲಿ ತತ್ತರಿಸಿದ್ದು. ಈತ ಅತ್ಯಂತ ನಿಪುಣ ಹಾಗೂ ಧೈರ್ಯಶಾಲಿ, ಅಣಜಿಯಲ್ಲಿ ನಡೆದ ಯುದ್ಧದಲ್ಲಿ ಹರಪನಹಳ್ಳಿಯವರನ್ನು ಬಗ್ಗುಬಡಿದ. ದುರ್ಗದಿಂದ ದಾವಣಗೆರೆ ಬಳಿಯ ಬಾತಿ ಗುಡ್ಡದ ಬಳಿ ಹರಿಹರವನ್ನು ಮುತ್ತಿಗೆ ಹಾಕಿದ ಮುಸ್ಲಿಂರನ್ನು ಯುದ್ಧ ತಂತ್ರದಿಂದ ಬಗ್ಗು ಬಡಿದು ಓಡಿಸಿದ ಬಸವಪಟ್ಟಣ, ರಾಯದುರ್ಗ ಪಾಳೆಯಗಾರರೊಂದಿಗೆ ಸ್ನೇಹ ಸಂಪಾದಿಸಿದ ಈತನು ಒಮ್ಮೆ ವೀರಶೈವ ದೀಕ್ಷೆಪಡೆದು ಮತ್ತೆ ತನ್ನ ಮೂಲ ಮತಕ್ಕೆ ಹಿಂದಿರುಗಿದನು. **'ಮುಮ್ಮಡಿ ಲಿಂಗಣ್ಣ ನಾಯಕ'** ಈತನನ್ನೇನು ಮುತ್ಸದ್ಧಿ ಆಡಳಿತಗಾರನೇನಾಗಿರದೆ ಇದ್ದರಿಂದ ದಳವಾಯಿಗಳು ಈತನನ್ನು ಬಂಧಿಸಿ ಸೆರೆಯಲ್ಲಿಟ್ಟು ಅಧಿಕಾರದ ಸೂತ್ರವನ್ನು ಹಿಡಿದರು. ಈತ ಚಿಕ್ಕಣ್ಣ ನಾಯಕರ ಸಹೋದರನಾಗಿದ್ದನು. **ಬಿಚ್ಚುಗತ್ತಿ ಭರಮಣ್ಣ ನಾಯಕ** ಈತನು ಕ್ರಿ.ಶ. ೧೬೮೯ರಲ್ಲಿ ಪಟ್ಟಕ್ಕೆ ಬಂದ ಭರಮಣ್ಣನಾಯಕನು ಜಗಲೂರು ತಾಲ್ಲೂಕಿನ ಬಿಳಿಚೋಡು ಗ್ರಾಮದವನು. ಮುಂದೆ ಈತನ ಸಂತತಿಗೆ ಬಿಳಿಚೋಡು ಸಂತತಿಯೆಂದೆ ಪ್ರಖ್ಯಾತವಾಗಿ ಚಿತ್ರದುರ್ಗವು ಅತ್ಯಂತ ಅಪಾಯದ ಸ್ಥಿತಿಯಲ್ಲಿದ್ದಂತಹ ಪೂರ್ವ ಕಾಲದಲ್ಲಿ ಪಟ್ಟಕ್ಕೆ ಬಂದು ದಳವಾಯಿಗಳ ದೌರ್ಜನ್ಯದ ದಂಗೆಯನ್ನು ದಕ್ಷತೆಯಿಂದ ಹತ್ತಿಕ್ಕಿ ದಕ್ಷ ಆಡಳಿತಗಾರನೆನಿಸಿದ.

ಈತನ ಕಾಲದಲ್ಲಿ ದುರ್ಗಕ್ಕೆ ಸುತ್ತಲೂ ಶತ್ರುಗಳು, ಹರಪನಹಳ್ಳಿ, ರಾಯದುರ್ಗ ಬಸವಪಟ್ಟಣ, ಮೊಘಲರು, ಹೀಗೆ ಸುತ್ತಲೂ ಶತ್ರುಗಳ ಕೋಟೆಯೇ ಇದ್ದರೂ ಅತ್ಯಂತ ಧೈರ್ಯ, ದಕ್ಷತೆಯಿಂದ ರಾಜ್ಯವಾಳಿ ಅನೇಕ ಪ್ರಜಾಹಿತ ಕಾರ್ಯಗಳನ್ನು ಮಾಡಿ ದುರ್ಗದಲ್ಲಿ ಶಾಂತಿಯನ್ನು ನೆಲೆಸಲು ಕಾರಣನಾದನು. ಸದಾ ಯುದ್ಧ ಮಾಡುತ್ತಲೇ ಇರಬೇಕಾದುದರಿಂದ ಬಿಚ್ಚುಗತ್ತಿ ಭರಮಣ್ಣನೆಂದೇ ಇತಿಹಾಸದಲ್ಲಿ ಪ್ರಖ್ಯಾತನಾದನು. ಈತನು ಶ್ರೀ ಮುರುಗಿ ಶಾಂತವೀರಸ್ವಾಮಿಗಳ ಆಶೀರ್ವಾದಕ್ಕೆ ಪಾತ್ರನಾದವನಾಗಿದ್ದು ಶ್ರೀ ಸ್ವಾಮಿಗಳಿಗೆ ಬೆಟ್ಟದ ಮೇಲೆ ೩೦೦ ಅಂಕಣದ ಕಲ್ಮಠ ಹಾಗೂ ಬೆಟ್ಟದ ಕೆಳಗೊಂದು ಮಠ ಕಟ್ಟಿಸಿಕೊಟ್ಟ, ಭರಮಸಾಗರದ ಕೆರೆಯೊಂದಿಗೆ ಸು.೨೦ ಕೆರೆಗಳನ್ನು ಕಟ್ಟಿಸಿದ್ದನು. ಹಾಗೂ ದುರ್ಗದ ಕೋಟೆಯಲ್ಲಿ ಸಿಹಿನೀರಿನ ಹೊಂಡ, ಸಂತೆಹೊಂಡ ಮುಂತಾದ ಹೊಂಡಗಳನ್ನು ಕಟ್ಟಿಸಿದನು. ಆದರೆ ಕ್ರಿ.ಶ. ೧೭೨೦-೨೧ರಲ್ಲಿ ಆದಿವಾಲದ ಲಡಾಯಿಯಲ್ಲಿ ಗೆದ್ದರೂ, ಗಾಯಗೊಂಡು ಕಾಲವಶವಾದನು. ಇವನ ಸ್ಮರಣೆಗೆ ಇಂದಿಗೂ ಈತ ಕಟ್ಟಿಸಿದ ದೇವ ಮಂದಿರಗಳು ಸಹ ಇವನ ಕೀರ್ತಿಗೆ ಸಾಕ್ಷಿಯಾಗಿವೆ (ಪ್ರಭಾಕರ ೧೯೯೧:೧-೬೭).

"**ಹಿರೇಮದಕರಿ ನಾಯಕ** ಬಿಚ್ಚುಗತ್ತಿ ಭರಮಣ್ಣ ನಾಯಕನ ಮಗ. ತನ್ನ ತಂದೆ ಭರಮಣ್ಣ ನಾಯಕನಂತೆಯೇ ಹಿರೇಮದಕರಿನಾಯಕನೂ ಹೋರಾಟಗಾರನಾಗಿದ್ದ. ಈತನ ಖ್ಯಾತಿಯೂ ಅಪಾರ. ಈತನಿಗೆ ಸಂಬಂಧಿಸಿದ 'ತಾರಾವಳಿ'ಯು ಈ ನಾಯಕನಿಗೆ "ಕ್ಷೀರಾಬ್ಧಿಯಲಿ ಚಂದ್ರ ಪುಟ್ಟಿದಂದದಲಿ ನಾರಿ ಸಿದ್ಧಾಂಬೆ ಭರಮೇಂದ್ರನುದರದಲಿ ಭೂರಮಣ ಮದಕರಿ ಜನಿಸಿ ಸುಖವಿರಲಿ ವರವಿತ್ತು ಸಿದ್ಧರಂಗಯ್ಯ ರಕ್ಷಿಸಲಿ" ಎಂದು ಹಾರೈಸಿದೆ; ಇವನ ಸಾಹಸಕಾರ್ಯಗಳನ್ನು ವರ್ಣಿಸಿದೆ. ಈ ನಾಯಕನಿಗೆ ಆನೆಗೊಂದಿಯವರ ಮಗಳು ಗಂಡೋಬವ್ವ ಅಥವಾ ಗಂಡಿಲ ಓಬವ್ವ ಮತ್ತು ಕನಕಗಿರಿಯವರ ಮಗಳು ವೆಂಕಟಾಚಲವ್ವರೊಡನೆ ವಿವಾಹವಾಯಿತು.

ಕ್ರಿಸ್ತಶಕ ೧೭೨೧ ರಿಂದ ೧೭೪೮ರ ವರೆಗೆ ಈ ನಾಯಕನು ಮರಾಠರು ಮತ್ತು ಮೊಗಲರ ವಿರುದ್ಧ ಒಂದಲ್ಲ ಒಂದು ಯುದ್ಧದಲ್ಲಿ ನಿರತನಾಗಬೇಕಾಯಿತು. ದುರ್ಗದವರ ಕೈತಪ್ಪಿಹೋಗಿದ್ದ ಉಚ್ಚಂಗಿದುರ್ಗವನ್ನು ಕ್ರಿ.ಶ.೧೭೨೭ರಲ್ಲಿ ಮತ್ತೆ ಆಕ್ರಮಿಸಿಕೊಳ್ಳಲೆತ್ನಿಸಿದರೂ ಸಾಧ್ಯವಾಗಲಿಲ್ಲ. ಹಾಗಲವಾಡಿಯವರು ಹರ್ತಿಕೋಟೆಯನ್ನು ಹಿಡಿದಾಗ ಒಪ್ಪಂದದ ನಂತರ ಅದು ಮತ್ತೆ ದುರ್ಗದವರಿಗೆ ಬಂದಿತು. ಕ್ರಿ.ಶ.೧೭೨೮ರಲ್ಲಿ ರತ್ನಗಿರಿಸೀಮೆಯ ವೇಣುಕಲ್ಲು, ಇಕ್ಕನೂರುಗಳನ್ನೂ ಕ್ರ.ಶ.೧೭೩೩ರಲ್ಲಿ ಗುಡೇಕೋಟೆ ಮತ್ತು ಅದಕ್ಕೆ ಸೇರಿದ ಕೆಲವು ಊರುಗಳನ್ನೂ ತೆಗೆದುಕೊಳ್ಳಲಾಯಿತು. ಕ್ರಿ.ಶ.೧೭೩೬ ಮತ್ತು ೧೭೩೭ರಲ್ಲಿ ಕೊಡಗನೂರು ಮತ್ತು ಹೊಳಲು ಕೋಟೆಗಳನ್ನು ಮುತ್ತಿದ ಸಿದ್ದೋಜಿ ಮತ್ತು ಹಾವನೂರವರುಗಳನ್ನೂ ಕ್ರಿ.ಶ.೧೭೩೮ರಲ್ಲಿ ಬಿದನೂರು ಮತ್ತು ಹರಪನಹಳ್ಳಿಯವರು ಮುತ್ತಿದ ಹೊಳಲು ಮತ್ತು ಮೈಲಾರಕೋಟೆಗಳನ್ನೂ ದುರ್ಗದವರು ಹೋರಾಡಿ ಬಿಡಿಸಿಕೊಂಡರು. ಚಿಂತನಕಲ್ಲಿನ ದೊರೆಯಾದ (ಹಿರೇ) ಮೆದಕೆರೆ ನಾಯಕನು

ಹರಪನಹಳ್ಳಿ ಅರಸನನ್ನು ಸೋಲಿಸಿ, ಅವನಿಗೆ ನೆಲೆಯೂರಲು ಅವಕಾಶ ಕೊಡದೆ, ಅವನ ರಾಜ್ಯವನ್ನು ಆಕ್ರಮಿಸಿಕೊಂಡು ಯುದ್ಧರಂಗದಲ್ಲಿ ಎದುರಾಗಿ ಹೆಚ್ಚಿನ ಪರಾಕ್ರಮದಿಂದ ಉಪಟಳವನ್ನು ಕೊಡುತ್ತಿದ್ದನೆಂದು ಲಿಂಗಣ್ಣ ಕವಿಯು 'ಕೆಳದಿನೃಪವಿಜಯಂ'ನಲ್ಲಿ ಹೇಳಿರುವ ಮಾತು ಇಲ್ಲಿ ಅಕ್ಷರಶಃ ಅನ್ವಯಿಸುತ್ತದೆನ್ನಬಹುದು.

ಹಿರೇಮದಕರಿನಾಯಕನು ಕ್ರಿ.ಶ.೧೭೪೩ರಲ್ಲಿ ಹರಪನಹಳ್ಳಿಯವರಿಂದ ಚಿಳ್‌ನಡು ಎಂಬ ಗ್ರಾಮವನ್ನು ವಶಪಡಿಸಿಕೊಂಡ. ಆದರೆ ತಮ್ಮಲ್ಲೇ ಹೊಂದಾಣಿಕೆ ಮಾಡಿಕೊಂಡ ಬಿದನೂರು, ಆನೆಗೊಂದಿ, ರಾಯದುರ್ಗ ಮತ್ತು ಹರಪನಹಳ್ಳಿಯವರು ದುರ್ಗದವರ ವಿರುದ್ಧ ತಿರುಗಿಬಿದ್ದು, ದುರ್ಗದ ಗಡಿಯ ರಾಮಗಿರಿದುರ್ಗ (ಹೊಳಲ್ಕೆರೆ ತಾಲ್ಲೂಕು)ವನ್ನು ಹಿಡಿದರು. ಹಿರೇಮದಕರಿಯು ಈ ಮುತ್ತಿಗೆಯನ್ನು ಬಿಡಿಸಲು ವೀರಾವೇಶದಿಂದ ಹೋರಾಡಿದುದನ್ನು ವಂಶಾವಳಿಗಳಲ್ಲಿ ವರ್ಣಿಸಲಾಗಿದೆ. ಈ ಕಾಳಗದಲ್ಲಿ ಈ ನಾಯಕನಿಗೆ ಗಾಯಗಳೂ ಆದವು. ದಿನಾಂಕ ೮–೮–೧೭೪೪ರಲ್ಲಿ ಈ ಅರಸನು ವಿರೋಧಿಗಳನ್ನು ಹೊಡೆದೋಡಿಸಿ ರಾಮಗಿರಿಯನ್ನು ಮರುಆಕ್ರಮಿಸಿಕೊಂಡ. ತನ್ನ ಜಯಸೂಚಕವಾಗಿ ನಾಯಕನು ಚಿನ್ನಗಹಳೆ ಹಿಡಿಸಿಕೊಂಡು ರಾಮಗಿರಿಕೋಟೆಯನ್ನು ಪ್ರವೇಶಿಸಿದಂತೆ. ಆಗ ವಶಪಡಿಸಿಕೊಂಡ ವಸ್ತುಗಳಲ್ಲಿ ಕಬ್ಬಿಣದ ಫಿರಂಗಿಗಳು ಇದ್ದು, ಅವುಗಳಲ್ಲಿ ಒಂದರ ಮೇಲೆ ಈ ಯುದ್ಧಕ್ಕೆ ಸಂಬಂಧಿಸಿದ ವೃತ್ತಾಂತವನ್ನು ಕಂಡರಿಸುವುದರೊಡನೆ ಅದನ್ನು ಚಿತ್ರದುರ್ಗಕ್ಕೆ ತಂದು (ಬಾಳೆಕಾಯಿ?) ಸಿದ್ಧೇಶ್ವರಸ್ವಾಮಿಯ ಸೇವೆಗೆ ಒಪ್ಪಿಸಲಾಯಿತು. (ಗವಿಯೊಂದರಲ್ಲಿ ಅಡಗಿಸಲ್ಪಟ್ಟಿದ್ದ ಈ ಶಾಸನೋಕ್ತ ಫಿರಂಗಿಯ ಕೆಲವು ವರುಷಗಳ ಹಿಂದೆ ಶೋಧಿತವಾಯಿತು). ಕ್ರಿ.ಶ.೧೭೪೪ ರಿಂದ ೧೭೪೮ರ ವರೆಗೆ ದುರ್ಗದ ಸೇನೆಯು ರಾಯದುರ್ಗಸೀಮೆಯ ಮೇಲೆ ಜಗಳಮಾಡಿ ವಶಪಡಿಸಿಕೊಂಡ ಗ್ರಾಮಗಳಿಗೆ ಪ್ರತಿನಾಮಗಳನ್ನು ನೀಡಲಾಯಿತು. ಕ್ರಿ.ಶ.೧೭೪೮ರಲ್ಲಿ ಬಿದನೂರು, ಸವಣೂರು ಮತ್ತು ಹರಪನಹಳ್ಳಿಯವರು ಒಂದುಗೂಡಿ ಹದಡಿಕೋಟೆ, ಹೊನ್ನೂರು, ಹೊಳಲು ಮತ್ತು ಮೈಲಾರಗಳನ್ನು ದುರ್ಗದವರಿಂದ ಕಸಿದುಕೊಂಡರು.

ಈ ಕಾಳಗಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಮತ್ತು ನೆರೆಯ ಸಂಸ್ಥಾನಿಕರ ಮಧ್ಯೆ ವಿರಸವು ಹೆಚ್ಚುತ್ತಾ ಹೋಯಿತು. ಹಿರೇಮದಕರಿನಾಯಕನು ಕ್ರಿ.ಶ.೧೭೪೮–೪೯ರಲ್ಲಿ ಮಾಯಕೊಂಡದ ಬಳಿ ನಡೆದ ಕದನದಲ್ಲಿ ಬಿದನೂರು, ಹರಪನಹಳ್ಳಿ, ರಾಯದುರ್ಗ, ಆನೆಗೊಂದಿ ಮತ್ತು ಸವಣೂರು ಸಂಸ್ಥಾನಿಕರ ವಿರುದ್ಧ ಭೀಕರ ಹೋರಾಟ ನಡೆಸಲು ನಿರ್ಧರಿಸಿದ. ಇದು ಚಿತ್ರದುರ್ಗ ಚರಿತ್ರೆಯಲ್ಲಿ ಪ್ರಸಿದ್ಧಿ ಪಡೆದ ಯುದ್ಧವಾಗಿದ್ದು, ಸಮಕಾಲೀನ ದಾಖಲೆಗಳು ಇದರ ಪೂರ್ಣವಿವರಗಳನ್ನು ಸಂಗ್ರಹಿಸಿವೆ. ಜನಪದಸಾಹಿತ್ಯವೂ ವಿಪುಲವಾಗಿ ಸೃಷ್ಟಿಯಾಗಿದೆ. ಈ ಯುದ್ಧ ನಡೆಸಲೋಸುಗ ಹಿರೇಮದಕರಿಯು ಗುತ್ತಿಯ ಸಿದ್ಧೋಜಿಯ ನೆರವನ್ನು ಯಾಚಿಸಿ

ಮುಲುಕಲೋಟಿಗೆ ಹೋಗಿದ್ದು, ಅವನ ೨೦,೨೨೨ ದಂಡಿನೊಡನೆ ಅಣಜಿಯ ಬಳಿ ಹೋಗಿ ಇಳಿದುಕೊಂಡ. ಆ ನಂತರ ನೀರ್ಥಡಿಗೆ ಹೋಗಿ ಇಲ್ಲಿ ತನ್ನ ನಾಗತಿಯರನ್ನೂ ಕುಮಾರ-ಕುಮಾರಿಯರನ್ನೂ ಇಳಿಸಿ, ಇಲ್ಲಿಂದ ಹೊರಟು ಮಾಯಕೊಂಡದ ಬಳಿ ಶತ್ರುಸೇನೆಯನ್ನು ಎದುರಿಸಿದ. ಈ ಕಾಳಗದ ಸಿದ್ಧತೆಯು ಕ್ರಿ.ಶ.೧೭೪೮ ಡಿಸೆಂಬರ್‌ನಲ್ಲಿ ಆರಂಭಗೊಂಡು ಕ್ರಿ.ಶ.೧೭೪೯ರ ಮಾರ್ಚ್ ೩ರಿಂದ ೫ರ ವರೆಗೆ ನಡೆಯಿತೆಂದು ದಾಖಲೆಗಳು ತಿಳಿಸುತ್ತವೆ.

ಹಿರೇಮದಕರಿನಾಯಕನ ಅಷ್ಟಮೂಲೆಯ ಪಾಲಕಿಯನ್ನು ಸೋಮಶೇಖರನಾಯಕನು ಕೊಟ್ಟೂರು ಬಸವೇಶ್ವರನ ದೇವಾಲಯಕ್ಕೆ ಕಾಣಿಕೆಯಾಗಿತ್ತನೆಂದೂ ಹೇಳಲಾಗಿದೆ (ತೆಲಗಾವಿ ೨೦೦೯:೧೬).ಈತನೂ ಸಹ ತಂದೆಯಂತೆ ಸದಾ ಯುದ್ಧದಲ್ಲಿ ನಿರತನಾಗಿರಬೇಕಿದ್ದಿತು. ಹರಪನಹಳ್ಳಿ, ಬಿದನೂರು, ಸವಣೂರು, ಸಂತೆಬೆನ್ನೂರು ಮುಂತಾದವರೊಂದಿಗೆ ಯುದ್ಧ ಮಾಡುತ್ತಲೇ ಇದ್ದನು. ಅತ್ಯಂತ ಶೂರ ಎಲ್ಲಾ ಯುದ್ಧಗಳಲ್ಲಿ ಗೆಲ್ಲುತ್ತಾ ಈಶಾನ್ಯದಲ್ಲಿ ರಾಜ್ಯವನ್ನು ವಿಸ್ತರಿಸಿದ್ದ. ಮೈಸೂರು ಅರಸರು, ಮರಾಠಿಗರು, ಸಿರಾದ ಸುಬೇದಾರರು ಇವನ ಶೌರ್ಯಕ್ಕೆ ಮೆಚ್ಚಿದ್ದರು. ಈತನು ದಾವಣಗೆರೆ ತಾಲ್ಲೂಕಿನ ಮಾಯಕೊಂಡದ ಕೋಟೆಯನ್ನು ಹರಪನಹಳ್ಳಿಯ ಪಾಳೆಯಗಾರ ಸೋಮಶೇಖರ ನಾಯಕ ಹಿಡಿದಾಗ ಮಾಯಕೊಂಡದ ಮೈದಾನದಲ್ಲಿ ಇವರಿಬ್ಬರಿಗೂ ಘೋರ ಕದನವೇ ನಡೆಯಿತು. ಹಾಗೂ ವೀರ ಮರಣವನ್ನಪ್ಪಿದರು. ಇಂದಿಗೂ ಸಹ ಈತನ ಸಮಾಧಿಯನ್ನು ಮಾಯಕೊಂಡದಲ್ಲಿ ಕಾಣಬಹುದಾಗಿದೆ (ವಿಜಯ ಕರ್ನಾಟಕ ದಿನಪತ್ರಿಕೆ ೧೨.೦೭.೨೦೧೦, ೧೦). ಈತನ ಬಗ್ಗೆ ಹೇಳುವುದಾದರೆ ಚಿತ್ರದುರ್ಗದ ಪಾಳೆಯಗಾರರಲ್ಲಿ ದಕ್ಷ ಆಡಳಿತಗಾರನೆನಿಸಿದ್ದ ಈತ ಗುಡಿಕೋಟೆ ರಾಯದುರ್ಗದ ಪಾಳೆಯಗಾರರನ್ನು ಸೋಲಿಸಿ ಬಳ್ಳಾರಿ, ರಾಯದುರ್ಗ, ಶಿವಮೊಗ್ಗ ಜಿಲ್ಲೆಗಳನ್ನು ಸೇರಿದಂತೆ ಒಟ್ಟು ೬೦ ಸೀಮೆಗಳ ಮೇಲೆ ಅಧಿಪತ್ಯ ಸ್ಥಾಪಿಸಿದ್ದ. ಹಾಗೂ ಸು. ೨೦೦ ಚ.ಮೈ.ಗಳಷ್ಟು ಭೂಮಿ ಇವನ ಒಡೆತನದಲ್ಲಿದ್ದಿತು. ಹಿರೇಮದಕರಿ ನಾಯಕನ ನಂತರ **ಇಮ್ಮಡಿ ಕಸ್ತೂರಿ ರಂಗಪ್ಪನಾಯಕ**ನೆಂಬುವನು ಅಧಿಕಾರಕ್ಕೆ ಬಂದನು. ಇವನು ಮಾಯಕೊಂಡದ ಲಡಾಯಿಯಲ್ಲಿ ತಂದೆ ಮರಣವನ್ನಪ್ಪಿದ್ದಾಗ ಕ್ರಿ.ಶ. ೧೭೪೮ರಲ್ಲಿ ಚಿತ್ರದುರ್ಗದ ಪಾಳೆಯಗಾರನಾಗಿ ಮುಂದುವರೆದು ಮುಂದೆ ಮರಾಠಿ ಮುರಾರಿರಾಯನ ಸಹಾಯದೊಂದಿಗೆ ಹರಪನಹಳ್ಳಿಯವರನ್ನು ಸೋಲಿಸಿ ಮಾಯಕೊಂಡವನ್ನು ಮತ್ತೆ ಗೆದ್ದು, ತಂದೆಗೆ ತಕ್ಕ ಮಗನೆನ್ನಿಸಿದ (ವೆಂಕಟೇಶಯ್ಯ ೧೯೭೧:೪೨-೪೯).

## ರಾಜಾವೀರ ಮದಕರಿನಾಯಕ

ಈತನು ಕಾಲದಲ್ಲಿಯೇ ಚಿತ್ರದುರ್ಗದ ವೈಭವವು ವಿಜೃಂಭಣೆಯಿಂದ ಮೆರೆಯುವಂತಾದದ್ದು. ಈತನು ಕಸ್ತೂರಿ ರಂಗಪ್ಪ ನಾಯಕನು ಪುತ್ರ ಸಂತಾನವಿಲ್ಲದೇ ಸತ್ತಿದ್ದರಿಂದ ಈತನ ಕಾಲದಲ್ಲಿಯೇ ಚಿತ್ರದುರ್ಗದ ವೈಭವವು ವಿಜೃಂಭಣೆಯಿಂದ ಮೆರೆಯುವಂತಾದದ್ದು. ಈತನ ಪಟ್ಟದರಸಿ

ನಾಗಡಿ ಗಂಡೋಬಳಮ್ಮ ನಾಗತಿಯು ಹಿರೇಮದಕರಿ ನಾಯಕನ ಸೋದರನಾದ ಜಾನಕಲ್ಲಿನ ತೊದಲು ಭರಮಪ್ಪನಾಯಕನ ಮಗನಾದ ೧೨ ವರ್ಷದ ವೀರಮದಕರಿಯನ್ನು ೧೭೫೪ರಲ್ಲಿ ಪಟ್ಟಕ್ಕೆ ತಂದಳು. ಗಂಡೋಬಳಮ್ಮ ನಾಗತಿಗೆ ಸ್ವಪ್ನದಲ್ಲಿ ಹಿರೇಮದಕರಿ ನಾಯಕನು ಬಂದು ಭರಮಣ್ಣ ನಾಯಕನ ಮಗನಾಗಿ ಪುನಃ ಜನಿಸಿರುವುದಾಗಿ ಹಾಗೂ ಅವನನ್ನೇ ಪಟ್ಟಕ್ಕೆ ತರಬೇಕು ಎಂಬುದಾಗಿ ಹೇಳಿದನಂತೆ. ಅಗ ನಾಗತಿಯು ದುರ್ಗದ ಜನತೆಯನ್ನು ಸಭೆ ಸೇರಿಸಿ ವೀರಮದಕರಿ ನಾಯಕನನ್ನು ಜಾನಕಲ್ಲಿನಿಂದ ಕರೆತಂದು ಪಟ್ಟಕಟ್ಟಿಸಿದಳಂತೆ (ಪುಟ್ಟಣ್ಣ ೧೯೯೭:೯೭). ರಾಜಾವೀರ ಮದಕರಿನಾಯಕನು ತನ್ನ ಆಳ್ವಿಕೆಯ ಅವಧಿಯಲ್ಲಿ ಕೈಗೊಂಡ ಕೆಲವು ರಾಜಕೀಯ ನಿರ್ಣಯಗಳೂ ಚಿತ್ರದುರ್ಗರಾಜ್ಯದ ಕೀರ್ತಿಯನ್ನು ದಕ್ಷಿಣಭಾರತದಲ್ಲೆಲ್ಲ ಹರಡಲು ಕಾರಣವೆನಿಸಿದವು. ಸುತ್ತಮುತ್ತಲ ಸಂಸ್ಥಾನಗಳವರೊಂದಿಗೆ ಮಾತ್ರವಲ್ಲದೆ, ಮುಖ್ಯವಾಗಿ ಶ್ರೀರಂಗಪಟ್ಟಣದ ನವಾಬರು ಮತ್ತು ಮರಾಠಾ ಪೇಷ್ವೆಗಳೊಡನೆ ಈ ನಾಯಕನು ಇಟ್ಟುಕೊಂಡಿದ್ದ ರಾಜಕೀಯಬಾಂಧವ್ಯ ಮತ್ತು ನಡೆಸಿದ ಹೋರಾಟಗಳು ಅವನ ರಾಜಕೀಯ ದೂರದೃಷ್ಟಿ ಹಾಗೂ ಶೌರ್ಯ–ಸಾಹಸಗಳನ್ನು ಪ್ರತಿನಿಧಿಸುತ್ತವೆ. ಈ ದೊರೆಯ ಆಡಳಿತದ ಆರಂಭದಲ್ಲಿ ರಾಯದುರ್ಗದವರು ಹರಪನಹಳ್ಳಿಯವರ ಸಹಾಯಪಡೆದು ದುರ್ಗದ ಗಡಿಗಳ ಮೇಲೆ ದಾಳಿಮಾಡಿದಾಗ, ದುರ್ಗದ ಸೈನ್ಯವು ಎರಡುಕೆರೆಗ್ರಾಮದ ಬಳಿ ರಾಯದುರ್ಗದವರನ್ನು ಎದುರಿಸಿತಲ್ಲದೆ, ಅವರ ಸೀಮೆಗೆ ಸೇರಿದ ಕೋನಾಪುರ, ಕೊಡಗನೂರುಗಳನ್ನು ವಶಪಡಿಸಿಕೊಂಡಿತು. ರಾಯದುರ್ಗಪೇಟೆಯನ್ನು ಹೊಕ್ಕು ಅದನ್ನೂ ತೆಗೆದುಕೊಂಡಿತು. ಕ್ರಿ.ಶ.೧೭೬೦ರಲ್ಲಿ ಹರಪನಹಳ್ಳಿಯ ಸೋಮಶೇಖರನಾಯಕನು ಸವಣೂರು ಹಕೀಂಖಾನ್, ರಾಯದುರ್ಗದ ಕೃಷ್ಣಪ್ಪನಾಯಕ ಮತ್ತು ಬಿದನೂರಿನವರಿಂದ ಪ್ರೇರೇಪಿಸಲ್ಪಟ್ಟು ಈ ಎಲ್ಲರ ಭಾರೀ ಫೌಜಿನೊಡನೆ ದುರ್ಗದವರ ತೂಯಲಹಳ್ಳಿಯನ್ನು ಆಕ್ರಮಿಸಲು ಪ್ರಯತ್ನಿಸಿದಲ್ಲಿ, ಮದಕರಿನಾಯಕನು ಕಣಕುಪ್ಪೆಗೆ (ಜಗಲೂರು ತಾಲ್ಲೂಕು) ಹೋಗಿ ಮೊಕ್ಕಾಂ ಮಾಡಿ ಆ ನಂತರ ಶತ್ರುಗಳ ಮರುಹೊಡೆತ ತಾಳಲಾರದೆ ಹಿಂದಿರುಗಬೇಕಾಯಿತು. ಕ್ರಿ.ಶ.೧೭೬೧ರಲ್ಲಿ ಜರಿಮಲೆ ಮತ್ತು ತರೀಕೆರೆಯವರ ಹಾವಳಿಯನ್ನು ಅಡಗಿಸಿದ.

ಮೈಸೂರು ಚರಿತ್ರೆಯಲ್ಲಿ ಹೆಸರಾದ ಶ್ರೀರಂಗಪಟ್ಟಣದ ನವಾಬ ಹೈದರ್‌ಆಲಿಖಾನನು ಕರ್ನಾಟಕದಲ್ಲಿ ಎಲ್ಲ ಸಂಸ್ಥಾನಿಕರನ್ನೂ ಹತ್ತಿಕ್ಕುವ ಪ್ರಯತ್ನದಲ್ಲಿ ತನ್ನ ವಶಕ್ಕೆ ತೆಗೆದುಕೊಂಡ ಕೊನೆಯ ಸಂಸ್ಥಾನವೆಂದರೆ ಚಿತ್ರದುರ್ಗ ಮಾತ್ರ. ಆದರೆ ಇದಕ್ಕೆ ಮುನ್ನ ರಾಜಾ ಮದಕರಿನಾಯಕನಿಂದ ಹೈದರ್‌ಆಲಿಯು ಪಡೆದುಕೊಂಡ ರಾಜಕೀಯ ಲಾಭ ಅಪಾರ. ಹೈದರ್‌ಆಲಿಯ ಉದ್ದೇಶವನ್ನು ಅರಿತಿದ್ದ ಮದಕರಿಯೂ ತನ್ನ ನೆರವನ್ನು ಆತನಿಗೆ ನೀಡುತ್ತಿದ್ದಂತೆಯೇ ಇನ್ನೊಂದೆಡೆ ಮರಾಠರ ಸಖ್ಯವನ್ನು ಬೆಳೆಸಿ ತನ್ನ ಭದ್ರತೆಗೆ ಸಂಚಕಾರ ಒದಗದಂತೆ ಜಾಗೃತಿ

ವಹಿಸಲೆತ್ನಿಸುತ್ತಿದ್ದ. ಕ್ರಿ.ಶ.೧೭೬೩ರಲ್ಲಿ ಮದಕರಿಯು ಹೈದರ್‌ಆಲಿಯ ಪರವಾಗಿ ಬಿದನೂರಿನ ಮೂರನೆಯ ಸೋಮಶೇಖರನಾಯಕನ ವಿರುದ್ಧ ಹೋರಾಡಿ ಬಿದನೂರನ್ನು ಹೈದರ್‌ಆಲಿಗೆ ವಶಮಾಡಿಕೊಟ್ಟ, ಅದೇ ವರುಷದಲ್ಲಿ ಬಸವಾಪಟ್ಟಣವನ್ನು ಹಾದು ಹೊನ್ನಳಿಯ ಹೊಳೆಯನ್ನು ಹರಿಗೋಲಿನ ಮೇಲೆ ದಾಟಿಹೋಗಿ ಬಂಕಾಪುರದ ಬಳಿ ಬೀಡುಬಿಟ್ಟಿದ್ದ ಹೈದರ್‌ಆಲಿಯನ್ನು ಕಂಡು, ಬಂಕಾಪುರದ ಕೋಟೆಯನ್ನು ಹೋರಾಟದಲ್ಲಿ ಹಿಡಿದು ಅದನ್ನು ಅವನಿಗೆ ಮಾಡಿಸಿಕೊಟ್ಟ, ಕ್ರಿ.ಶ.೧೭೬೪ರಲ್ಲಿ ಹೈದರ್‌ಆಲಿ ಮತ್ತು ಮರಾಠಾ ಪೇಷ್ವೆ ಮಾಧವರಾಯರಿಗೆ ಕದನ ಏರ್ಪಟ್ಟಾಗ ಮದಕರಿಯು ನವಾಬನಿಗೆ ಸಹಾಯಮಾಡಿ ಯುದ್ಧದಲ್ಲಿ ಗೆಲ್ಲುವಂತೆ ಮಾಡಿದ. ಹಾಗೆಯೇ, ನಿಡುಗಲ್ಲು ಹಾಗೂ ನಿಜಗಲ್ಲು ದುರ್ಗಗಳನ್ನೂ ಠಾಣೆಹಾಕಿಸಿಕೊಟ್ಟ.

ಮರಾಠರೊಡನೆಯೂ ಸಖ್ಯದಿಂದ ಇದ್ದ ಮದಕರಿನಾಯಕನು ಪೇಷ್ವೆ ಮಾಧವರಾಯನಿಗೂ ತಮ್ಮ ಸಹಾಯದ ಹಸ್ತ ಚಾಚಿದ. ಇದರಿಂದ ಹೈದರ್‌ಆಲಿಯು ಮರಾಠರ ಹಾವಳಿಯನ್ನು ಸಹಿಸಬೇಕಾಯಿತು. ಮದಕರಿಯ ಭಾರೀ ದಂಡಿನ ಸಹಾಯದಿಂದ ಮಾಧವರಾಯನು ತಮ್ಮಿಂದ ಸಾಧಿಸಲು ಅಸಾಧ್ಯವೆನಿಸಿದ್ದ ಹಾಗೂ ಹೈದರ್‌ಆಲಿಗೆ ಸೇರಿದ್ದ ಸಾವನದುರ್ಗ, ಹುತ್ತರಿದುರ್ಗ, ನುಗ್ಗೆಹಳ್ಳಿ, ಹಾಗಲವಾಡಿ, ಬಾಣಾವಾರ ಮೊದಲಾದ ಕೋಟೆಗಳನ್ನು ಆಕ್ರಮಿಸಿದನಲ್ಲದೆ, ಕ್ರಿ.ಶ ೧೭೬೯ ರಲ್ಲಿ ತುರುವೇಕೆರೆ, ಬೆಳ್ಳೂರು, ಕೋಲಾರ, ಮುಳಬಾಗಿಲು, ದೇವರಾಯನದುರ್ಗ, ಮಂಜರಾಬಾದ್, ದಾರಿನಾಯಕನಪಾಳ್ಯ ಮತ್ತು ಚಿಕ್ಕ ಬಳ್ಳಾಪುರಗಳಿಗೂ ಠಾಣೆಹಾಕಿದ. ಅಲ್ಲದೆ, ಮೂರುಸಾರಿ ಪ್ರಯತ್ನಿಸಿದರೂ ಆಕ್ರಮಿಸಿಕೊಳ್ಳಲು ಸಾಧ್ಯವಾಗದಿದ್ದ ನಿಜಗಲ್ಲು ಕೋಟೆಯು ಮದಕರಿಯ ಸಹಾಯದಿಂದ ಸುಲಭವಾಗಿ ಅವನ ವಶಕ್ಕೆ ಬಂದಿತು. ಆನವಟ್ಟಿಕೋಟೆಯನ್ನು ಹಿಡಿಯುವಲ್ಲಿ ದುರ್ಗದ ಸೇನೆಯು ಮರಾಠರ ಪರವಾಗಿ ವಿಶೇಷ ಶೌರ್ಯವನ್ನು ಪ್ರದರ್ಶಿಸಿತು. ಇವೆಲ್ಲವುಗಳಿಂದ ಹೈದರ್‌ಆಲಿಯು ತನ್ನ ಅಂತರಂಗದಲ್ಲಿ ಮದಕರಿನಾಯಕನ್ನು ದ್ವೇಷಿಸತೊಡಗಿದುದು ಸ್ಪಷ್ಟ.

ಚಿತ್ರದುರ್ಗದ ವಿರುದ್ಧ ಹೈದರ್‌ಆಲಿಯು ಒಟ್ಟು ನಾಲ್ಕುಬಾರಿ ಯುದ್ಧವನ್ನು ಹೂಡಿದ. ಚಿತ್ರದುರ್ಗ ವಂಶಾವಳಿಗಳಲ್ಲಿಯೂ ಈ ಬಗೆಗೆ ಸೂಚನೆ ದೊರಕುತ್ತದೆ. ಕ್ರಿ.ಶ. ೧೭೬೨ರಲ್ಲಿ ಹೈದರಆಲಿಯು ಮೊದಲ ಬಾರಿಗೆ ಚಿತ್ರದುರ್ಗದ ವಿರುದ್ಧ ದಂಡೆತ್ತಿ ಬಂದ. ಕ್ರಿ.ಶ ೧೭೭೪ರ ಮಾರ್ಚ್‌ನಲ್ಲಿ ಎರಡನೆಯ ಕ್ರಿ.ಶ ೧೭೭೭ರ ಜೂನ್‌ನಲ್ಲಿ ಮೂರನೆಯ ಹಾಗೂ ಕ್ರಿ.ಶ ೧೭೭೯ರ ಫೆಬ್ರವರಿಯಲ್ಲಿ ಕೊನೆಯಬಾರಿಗೆ ದುರ್ಗದ ಮೇಲೆ ಮುತ್ತಿಗೆ ಹಾಕಿದನಲ್ಲದೆ, ನಾಲ್ಕು ತಿಂಗಳುಗಳ ಕಾಲ ಸತತ ಹೋರಾಟ ಕೈಗೊಂಡ. ಈ ಕೊನೆಯ ಕದನ ಕುರಿತು 'ಚಿತ್ರದುರ್ಗದ ಬಖೈರು' ವಿವರ ನೀಡುತ್ತದೆ (ತೆಲಗಾವಿ ೨೦೦೯:೨೦).

**ಚಿತ್ರದುರ್ಗವನ್ನಾಳಿದ ರಾಜ ವಂಶಾವಳಿಗಳ ಪಟ್ಟಿ**

೧. ಮತ್ತಿ ತಿಮ್ಮಣ್ಣ ನಾಯಕ (ಕ್ರಿ.ಶ. ೧೫೬೮-೧೫೮೯)

೨. ಒಂದನೇ ಓಬಣ್ಣನಾಯಕ (ಕ್ರಿ.ಶ. ೧೫೮೯-೧೬೦೩)

೩. ಒಂದನೇ ಕಸ್ತೂರಿ ರಂಗಪ್ಪನಾಯಕ (ಕ್ರಿ.ಶ. ೧೬೦೩-೧೬೫೨)

೪. ಇಮ್ಮಡಿ ಮದಕರಿನಾಯಕ (ಕ್ರಿ.ಶ. ೧೬೫೨-೧೬೭೫)

೫. ಇಮ್ಮಡಿ ಓಬಣ್ಣನಾಯಕ (ಕ್ರಿ.ಶ. ೧೬೭೫)

೬. ಕಸ್ತೂರಿ ಚಿಕ್ಕಣ್ಣನಾಯಕ (ಕ್ರಿ.ಶ. ೧೬೭೫-೧೬೮೬)

೭. ಮುಮ್ಮಡಿ ಮದಕರಿ ನಾಯಕ (ಕ್ರಿ.ಶ. ೧೬೮೬-೧೬೮೮)

೮. ದೊಣ್ಣೆ ರಂಗಪ್ಪನಾಯಕ (ಕ್ರಿ.ಶ. ೧೬೮೮)

೯. ಸೂರ್ಯಕಾಂತಿ ರಂಗಪ್ಪನಾಯಕ (ಕ್ರಿ.ಶ. ೧೬೮೯)

೧೦. ಬಿಚ್ಚುಗತ್ತಿ ಭರಮಣ್ಣ ನಾಯಕ (ಕ್ರಿ.ಶ. ೧೬೮೯-೧೭೨೧)

೧೧. ಹಿರೇಮದಕರಿ ನಾಯಕ (ಕ್ರಿ.ಶ. ೧೭೨೧-೧೭೪೯)

೧೨. ಇಮ್ಮಡಿ ಕಸ್ತೂರಿ ರಂಗಪ್ಪನಾಯಕ (ಕ್ರಿ.ಶ. ೧೭೪೯-೧೭೫೪)

೧೩. ರಾಜಾವೀರ ಮದಕರಿನಾಯಕ (ಕ್ರಿ.ಶ. ೧೭೫೪-೧೭೭೯)

(ತೆಲಗಾವಿ ೨೦೧೦ : ೨೩)

## ಓಬವ್ವಳ ಕುರಿತ ಐತಿಹ್ಯಗಳು

ಕರ್ನಾಟಕದಲ್ಲಿ ಶೌರ್ಯಕ್ಕೆ ಹೆಸರಾದ ಹಲವಾರು ವೀರ ಮಹಿಳೆಯರಲ್ಲಿ ವೀರವನಿತೆ ಓಬವ್ವಳು ಸಹ ಒಬ್ಬಳಾಗಿದ್ದಾಳೆ. ಇವಳು ಚಿತ್ರದುರ್ಗದ ಕೊನೆಯ ರಾಜವೀರ ಮದಕರಿನಾಯಕನ ಆಡಳಿತದ ಸಂದರ್ಭದಲ್ಲಿ ಕಂಡುಬರುತ್ತಾಳೆ. ಹೈದರಾಲಿಯು ಚಿತ್ರದುರ್ಗದ ಕೋಟೆಯನ್ನು ಮುತ್ತಿಗೆ ಹಾಕಿದಾಗ (ಕಹಳೆಯವನ ಪತ್ನಿಯಾದ) ಕಳ್ಳಗಂಡಿಯಿಂದ ಬರುವ ಹೈದರಾಲಿಯು ಸೈನ್ಯವನ್ನು ಸಾವಿನದವಡೆಗೆ ತಳ್ಳುತ್ತ, ಒನಕೆಯಿಂದಲೇ ಹೈದರಾಲಿಯ ಸೈನ್ಯವನ್ನು ಸಂಪರಿಸಿದಳು. ಹಾಗೂ ಇಲ್ಲಿ ಮುಖ್ಯವಾಗಿ ಮೌಖಿಕ ಆಕರದಲ್ಲಿ ಇವಳು ಹೈದರಾಲಿಯ ಸೈನ್ಯದ ವಿರುದ್ಧ ಹೋರಾಡುತ್ತಲೇ ಮರಣ ಹೊಂದಿದಳು ಎಂಬುದಾಗಿ ತಿಳಿದಿತ್ತು. ಆದರೆ ಇದಕ್ಕೆ ಸಂಬಂಧಿಸಿದ ಲಿಖಿತ ದಾಖಲೆಗಳಾದ, ಲಕ್ಷ್ಮಣ್ ತೆಲಗಾವಿ, ವೆಂಕಣ್ಣಾಚಾರ್ (೧೯೭೯), ಗಿರಿಜ ಟಿ. (೧೯೯೧), ಪುಟ್ಟಣ್ಣ ಎಂ.ಎಸ್. (೧೯೯೭), ಕೃಷ್ಣಯ್ಯ ಎ.ಡಿ. (೧೯೭೯), ಶ್ರೀಧರಮೂರ್ತಿ (೧೯೭೨), ವೆಂಕಟೇಶಯ್ಯ (೧೯೭೧), ಕ.ರಾ.ಕೃ (೧೯೭೫), ವಿಶ್ವೇಶ್ವರಪ್ಪ ಜಿ. (೧೯೮೩), ಮಂಜುನಾಥರಾವ್ (೧೯೭೯), ವಿಠಲರಾವ್ ಗಾಯಕ್ವಾಡ್ (೨೦೦೩), ಕಮಲಾ ಹಂಪನಾ (೨೦೦೦), ದೇಸಾಯಿ ಪಾಂಡುರಂಗರಾಯರು (೨೦೦೮), ಲಕ್ಷ್ಮಣ್ ತೆಲಗಾವಿ, ವೆಂಕಣ್ಣಾಚಾರ್,

ಹುಲ್ಲೂರು ಶ್ರೀನಿವಾಸ ಪಾಂಡುರಂಗ ಜೋಯಿಸ್ (೧೯೮೦) ಮುಂತಾದವರ ಬರಹ ಮತ್ತು ಕೃತಿಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಂಡು ಪ್ರಸ್ತುತ ಈ ಅಧ್ಯಯನದಲ್ಲಿ ಓಬವ್ವಳಿಗೆ ಸಂಬಂಧಿಸಿದ ವಿವಿಧ ವಿಷಯಗಳನ್ನು ತಿಳಿಸಿಕೊಡಲು ಪ್ರಯತ್ನಿಸಲಾಗಿದೆ.

ಕೃಷ್ಣಯ್ಯನವರು 'ಚಂದ್ರವಳ್ಳಿ', ೧೯೭೯ ಎಂಬ ಲೇಖನದಲ್ಲಿ ದಾಖಲಿಸಿರುವಂತೆ ಈ ಕೆಳಗಿನ ಅಂಶವನ್ನೊಂದಿದ್ದು, ಈ ವಿಷಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿಷಯವನ್ನು ಇವರ ಲೇಖನದಿಂದಲೇ ಪಡೆದು ಓಬವ್ವಳ ಐತಿಹಾಸಿಕತೆಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಚಿತ್ರದುರ್ಗದ ರೋಮಾಂಚಕಾರಿ ಇತಿಹಾಸದಲ್ಲಿ ಮಹತ್ವಪೂರ್ಣ ಪಾತ್ರ ನಿರ್ವಹಿಸಿದ ಸಾಧ್ವಿ ಶಿರೋಮಣಿ ಒನಕೆ ಓಬವ್ವನ ವಿಷಯವನ್ನು ಕರ್ನಾಟಕದ ಇತಿಹಾಸತಜ್ಞರು ಇಂದು ಮರೆತಂತೆ ತೋರುತ್ತದೆ. ಕರ್ನಾಟಕ ಇತಿಹಾಸವನ್ನು ಕುರಿತು ತಾವು ರಚಿಸುವ ಗ್ರಂಥಗಳಲ್ಲಿ ಈಕೆಯ ಸಂಗತಿಯನ್ನು ನಿರ್ದಯವಾಗಿ ಕೈಬಿಡುತ್ತಾರೆಂದರೆ ಆಶ್ಚರ್ಯವೇನಿಲ್ಲ.

ಆದರೂ ಓಬವ್ವೆಯನ್ನು ಕುರಿತು ಈಚೆಗೆ ಕೆಲವರು ಬರೆದಿರುವರು. ತಮ್ಮ ಬರಹದಲ್ಲಿ ಓಬವ್ವೆ ಮದಕರಿ ವಂಶದ ಒಬ್ಬ ನಾಗತಿಯೆಂತಲೂ, ನಾಯಕರ ವಂಶದ ಒಬ್ಬ ಸೇನಾಧಿಕಾರಿಯ ಹೆಂಡತಿಯೆಂತಲೂ ಬರೆದುಕೊಂಡಿದ್ದಾರೆ. ಇದು ಸತ್ಯಕ್ಕೆ ದೂರವಾದ ಸಂಗತಿ ಮಾತ್ರವಲ್ಲ. ಇತಿಹಾಸದ ಬಗ್ಗೆ ಅವರಿಗಿರುವ ಅಲ್ಪಜ್ಞಾನದ ಪ್ರತೀಕವೂ ಆಹುದು. ವ್ಯಕ್ತಿ ಅಥವಾ ಘಟನೆಯನ್ನು ಕುರಿತು ಬರೆಯುವಾಗ ಯಾರೇ ಆಗಲಿ ಕೂಲಂಕುಷವಾಗಿ ಅರಿತು, ಚರ್ಚಿಸಿ, ಸಂಬಂಧಿಸಿದ ದಾಖಲೆಗಳನ್ನು ಅವಲೋಕಿಸಿ ಖಚಿತ ನಿರೂಪಣೆಯನ್ನು ನೀಡುವುದು ಸೂಕ್ತ.

ಈವರೆಗೆ ಓಬವ್ವೆಯ ಕಥೆಯನ್ನು ಮಕ್ಕಳಿಗಾಗಿ ಪ್ರಾಥಮಿಕ ಶಾಲಾ ಪುಸ್ತಕಗಳಲ್ಲಿ ಪ್ರಕಟಿಸಿ ಆಕೆಯನ್ನು ಕುರಿತು ಕಿಂಚಿತ್ತು ಅರಿಯುವಂತೆ ಮಾಡುವಲ್ಲಿ ನಾವು ಯಶಸ್ವಿಯಾಗಿದ್ದೇವೆಯೇ ಹೊರತು ಹೆಚ್ಚಿನ ಪ್ರಯತ್ನ ಕೈಗೊಂಡಿಲ್ಲ. ಹಿರಿಯ ಲೇಖಕರಲ್ಲಿ ಕೆಲವರು ಆಕೆಯ ಬಗ್ಗೆ ಪುಸ್ತಕವನ್ನು ರಚಿಸಿದ್ದಾರೆ; ಲೇಖನಗಳನ್ನು ಬರೆದಿದ್ದಾರೆ.

ಹೀಗೆ ಸಾಕಷ್ಟು ಆಧಾರಗಳು ದೊರೆತಿಲ್ಲವೆಂಬುದು ಮೊದಲನೆಯ ಕಾರಣವಾದರೆ, ಓಬವ್ವ ಕಹಳೆಯನ್ನೂದುವ ಚಲವಾದಿ ವಂಶದವನ ಹೆಂಡತಿ: ಆಕೆಯ ಬಗ್ಗೆ ಅಷ್ಟು ಮಹತ್ವ ನೀಡುವುದು ಸರಿಯಲ್ಲ ಎಂಬ ಭಾವನೆಯೂ ಇದ್ದಿರಬಹುದು. ಈ ದಿಸೆಯಲ್ಲಿ ಇತಿಹಾಸಕಾರರು ಈವರೆಗೆ ಸಂಶೋಧನೆ ನಡೆಸದೆ ಇರುವುದು ಖೇದದ ಸಂಗತಿ.

**ಚಲವಾದಿ ವಂಶಸ್ಥರು** ಪುರಾಣಗಳಲ್ಲಿ ಉದ್ಧೃತವಾಗಿರುವ ಚಲದಂಕ ಮಲ್ಲನೆಂಬುವನ ವಂಶಸ್ಥರೇ ಈ ಚಲವಾದಿಗಳು. ಈ ಚಲವಾದಿಗಳು ಹಿಂದೆ ರಾಜ ಮಹಾರಾಜರುಗಳಲ್ಲಿ ಕಹಳೆಯವರಾಗಿ ಸೇರಿಕೊಂಡಿದ್ದರೂ, ಯುದ್ಧ ಸಮಯದಲ್ಲಿ ಯೋಧರಾಗಿಯೂ ಸೇವೆಸಲ್ಲಿಸುತ್ತಿದ್ದರು.

ಚಿತ್ರದುರ್ಗ, ಗುಡಿಕೋಟೆ ಪಾಳೆಯಗಾರರೂ ಇವರನ್ನು ಕಹಳೆಯವರನ್ನಾಗಿ ನೇಮಿಸಿಕೊಂಡಿದ್ದು ಇತಿಹಾಸದಿಂದ ವ್ಯಕ್ತಪಡುತ್ತದೆ.

ಚಲವಾದಿ ವಂಶಜರು ಏಕವರ್ಣಾತ್ಮಕ ವೈದಿಕರು, ಮಂದಲಗೋತ್ರದವರು; ಹರಿಹರರಿಗೆ ಭೇದವೆಣಿಸದೆ ಶೈವ ಸಂಪ್ರದಾಯ ಹಾಗೂ ಕದುರೆ ನರಸಿಂಹಸ್ವಾಮಿ, ಲಕ್ಷ್ಮೀದೇವರುಗಳ ಆರಾಧಕರು. ಇವರು ನೇಯ್ಗೆ ಕೆಲಸ ಮತ್ತು ವಾದ್ಯಗಳನ್ನು ನುಡಿಸುವುದು, ಅದರಲ್ಲೂ ಕಹಳೆಯನ್ನೂದುವುದರಲ್ಲಿ ತಮ್ಮದೇ ಆದ ವೈಶಿಷ್ಟ್ಯತೆ ಪಡೆದಿದ್ದಾರೆ.

ಈ ವಂಶಸ್ಥರು ಕ್ರಿ.ಶ. ೧೩೫೮ರಲ್ಲಿ ಚಿತ್ರದುರ್ಗ ಸಂಸ್ಥಾನವನ್ನು ಸ್ಥಾಪಿಸಿದ ಮೂಲಪುರುಷ ಚಿತ್ರನಾಯಕ ತಿಮ್ಮಣ್ಣ ನಾಯಕರನ್ನು ಹಿಂಬಾಲಿಸಿಕೊಂಡು ಬಂದವರೆಂದೂ, ಮೊದಲಿಗೆ ರಾಮದುರ್ಗದಲ್ಲಿದ್ದವರೆಂದೂ ಪ್ರತೀತ ಇದೆ. ಯುದ್ಧ ಸಮಯದಲ್ಲಿ ಇವರು ಅಂಜದೆ, ಅಳುಕದೆ ಸೈನಿಕ ಪೋಷಾಕನ್ನು ಧರಿಸಿ ರಣಕಹಳೆಯೂದುತ್ತಾ ಸೈನ್ಯದ ಮುಂಭಾಗದಲ್ಲಿ ರಣಕಲಿಗಳಾಗಿ ಮುನ್ನುಗ್ಗುತ್ತಿದ್ದರು. ಇವರು ಸ್ವಾತಂತ್ರ್ಯಪ್ರಿಯರೂ, ಕಾರ್ಯನಿಷ್ಠರೂ, ನಂಬಿಕೆಗೆ ಅರ್ಹರಾದವರೂ ಆಗಿರುತ್ತಿದ್ದರು. ಈ ಕಾರಣದಿಂದಲೇ ಕಹಳೆಯವನನ್ನು ಕೆಲವು ಗುಪ್ತ ರಾಜಕೀಯ ಚರ್ಚೆಯಲ್ಲಿಯೂ ಭಾಗವಹಿಸಲು ಅನುಮತಿಯಿತ್ತಿದ್ದರು. ಹೀಗೆ ಈ ಚಲವಾದಿ ವಂಶಜರನ್ನು ಗೌರವಿಸಿ, ಪೋಷಿಸಿಕೊಂಡು ಬಂದ ಕೀರ್ತಿಗೆ ಚಿತ್ರದುರ್ಗ ಪಾಳೆಯಗಾರರು ಭಾಜನರಾಗಿದ್ದಾರೆ. ಅಲ್ಲದೆ ಈ ಪಾಳೆಯಗಾರರಲ್ಲಿ ಭಕ್ತಿ, ವಿಶ್ವಾಸಗಳನ್ನಿರಿಸಿ ಪ್ರಾಮಾಣಿಕತೆಯಿಂದ ಸೇವೆಸಲ್ಲಿಸಿ ಬಾಳಿದವರಲ್ಲಿ ಚಲವಾದಿ ವಂಶಸ್ಥರೂ ಮುಖ್ಯರೆನಿಸಿದ್ದಾರೆ.

ಇಂತಹ ವಂಶಜರಲ್ಲಿ ಜನಿಸಿ ಚಿತ್ರದುರ್ಗದ ಕೋಟೆಯನ್ನು ರಕ್ಷಿಸಿದ ವೀರ ವನಿತೆ ಓಬವ್ವೆಯ ಐತಿಹಾಸಿಕತೆ ಮತ್ತು ಸಾಹಸವನ್ನು ಈಕೆಗೆ ಸಂಬಂಧಿಸಿದ ಕೆಲವು ಆಧಾರಗಳಿಂದ ರಚಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

**ಓಬವ್ವೆಯ ವೃತ್ತಾಂತ** ಚಿತ್ರದುರ್ಗದ ಪಾಳೆಯಗಾರರು ಆಳ್ವಿಕೆ ನಡೆಸುತ್ತಿದ್ದ ಸಮಯದಲ್ಲಿ ಗುಡಿಕೋಟೆ ಸಂಸ್ಥಾನವೂ ಒಂದು ಸಾಮಂತರಾಜ್ಯವಾಗಿದ್ದಿತು. ಅಲ್ಲಿನ ಪಾಳೆಯಗಾರರಲ್ಲಿ ಚಲವಾದಿ ವಂಶಸ್ಥನಾದ ಚಿನ್ನಪ್ಪನೆಂಬುವನು ಕಹಳೆಯವನಾಗಿಯೂ, ದೊರೆಗೆ ಅಚ್ಚುಮೆಚ್ಚಿನ ಸೇವಕನಾಗಿಯೂ ಇದ್ದನು. ಈತನಿಗೆ ಕದುರಪ್ಪ, ತಿಮ್ಮಣ್ಣ ಮತ್ತು ಓಬವ್ವೆ–ಇವರು ಮೂರುಜನ ಮಕ್ಕಳು. ಈ ಓಬವ್ವೆಯೇ ಮುಂದೆ ಚಿತ್ರದುರ್ಗದ ಕೋಟೆಯನ್ನು ಸೇರಿ ಅಲ್ಲಿನ ಪಾಳೆಯಗಾರರ ರಾಜಧಾನಿಯನ್ನು ಕೆಲಕಾಲ ಶತೃಗಳ ಕೈಯಿಂದ ಪಾರುಮಾಡಿದಳು.

ಆಗ ನಡೆದ ಘಟನೆಯೊಂದನ್ನು ಇಲ್ಲಿ ಸ್ಮರಿಸಲು ಯೋಗ್ಯ. ಚಿತ್ರದುರ್ಗದ ಅರಸನು ಗುಡಿಕೋಟೆಯ ರಾಜಕೀಯ ಸ್ಥಿತಿಯನ್ನರಿಯಲು ಕಳುಹಿಸಿದ್ದ ದೂತನೊಬ್ಬನು ನಿಗದಿಯಾದ

ಸಮಯ ಮೀರಿದರೂ ಹಿಂದಿರುಗಲಲ್ಲಿವಾದ್ದರಿಂದ, ತನ್ನ ಆಪ್ತ ಸೇವಕ ಕಹಳೆ ಹನುಮಪ್ಪನೊಂದಿಗೆ ಓಲೆಯನ್ನಿತ್ತು ಗುಡಿಕೋಟೆಗೆ ಕಳುಹಿಸಿಕೊಟ್ಟನು. ಹನುಮಪ್ಪನು ರಾಜನಪ್ಪಣೆಯಂತೆ ಗುಡಿಕೋಟೆಗೆ ಹೋಗಿ ಸ್ವಾಮಿಕಾರ್ಯವನ್ನು ಪೂರೈಸಿ, ಅನಂತರ ಲೋಕರೂಢಿಯಂತೆ ಅಲ್ಲಯೇ ಇದ್ದು ತನ್ನ ಬಂಧು ಕಹಳೆ ಚಿನ್ನಪ್ಪನಮನೆಗೆ ಹೋದನೆಂತಲೂ, ಚಿನ್ನಪ್ಪನ ಮಗಳು ಓಬವ್ವೆಯ ರೂಪ, ಗುಣ ಲಾವಣ್ಯಗಳನ್ನು ನೋಡಿ ತನ್ನ ಮಗನಾದ ಮದ್ದ ಹನುಮಪ್ಪನಿಗೆ ತಕ್ಕ ವಧುವೆಂದು ತಿಳಿದು, ಚಿನ್ನಪ್ಪನ ಆತಿಥ್ಯವನ್ನು ಸ್ವೀಕರಿಸಿ ಚಿತ್ರದುರ್ಗಕ್ಕೆ ಹಿಂತಿರುಗಿದನೆಂತಲೂ, ಅನಂತರ ಚಿತ್ರದುರ್ಗ ಮತ್ತು ಗುಡಿಕೋಟೆ ಪಾಳೆಗಾರರ ಅನುಮತಿ ಪಡೆದು ಓಬವ್ವೆ ಮತ್ತು ತನ್ನ ಮಗ ಮದ್ದ ಹನುಮಪ್ಪ ಇವರ ವಿವಾಹವನ್ನು ವೈಶಾಖ ಶುದ್ಧ ಪಂಚಮಿಯ ದಿನ ಗುರು–ಹಿರಿಯರ ಮತ್ತು ಅಪಾರ ಬಂಧುಗಳ ಸಮ್ಮುಖದಲ್ಲಿ ನೆರವೇರಿಸಿದನೆಂದು ತಿಳಿದುಬರುತ್ತದೆ.

ವಿವಾಹ ನಂತರ ಓಬವ್ವ ಚಿತ್ರದುರ್ಗದ ತನ್ನ ಪತಿಯ ಗೃಹವನ್ನು ಸೇರಿದಳು. ಈ ಸಮಯದಲ್ಲಿ ಚಿತ್ರದುರ್ಗ ಸಿಂಹಾಸನವನ್ನು ಪಾಲಿಸುತ್ತಿದ್ದವನು ಕಡೆಯ ರಾಜಾ ವೀರ ಮದಕರಿ ನಾಯಕ ಇವನು ಅತ್ಯಂತ ವೈಭವದಿಂದ ಆಳ್ವಿಕೆ ನಡೆಸಿದ್ದನು. ಆಗಾಗಲೇ ಚಿತ್ರದುರ್ಗದ ಸುತ್ತಮುತ್ತಲಿನ ಪ್ರಾಂತ್ಯಗಳ ಪಾಳೆಯಗಾರರು ಈ ನಾಯಕನನ್ನು ದ್ವೇಷಿಸುತ್ತಿದ್ದು, ಸಂಸ್ಥಾನವನ್ನು ಹಾಳುಗೆಡವಲು ಹೊಂಚುಹಾಕುತ್ತಿದ್ದರು. ಈ ನಾಯಕನು ಪೂನಾದ ಮರಾಠರು ಮತ್ತು ಶ್ರೀರಂಗಪಟ್ಟಣದ ಹೈದರಾಲಿಯೊಡನೆ ರಾಜಕೀಯ ಸಂಬಂಧ ಹೊಂದಿದ್ದನು. ಇವನು ತನ್ನ ಸೈನಿಕರಿಗೆ ಕಟ್ಟುನಿಟ್ಟಾದ ಯುದ್ಧ ತರಬೇತಿ ನೀಡಿದ್ದು, ಗೋಬ್ರಾಹ್ಮಣ ರಕ್ಷಕನಾಗಿ ಹಾಗೂ ಪ್ರಜಾಹಿತೈಷಿಯಾಗಿ ರಾಜ್ಯವಾಳುತ್ತಿದ್ದನು. ಶತೃಗಳಿಂದ ಯಾವ ಸಮಯದಲ್ಲಾದರೂ ಚಿತ್ರದುರ್ಗಕ್ಕೆ ಅಪಾಯ ಸಂಭವಿಸಬಹುದೆಂದು ಬಹು ಜಾಗೃತನಾಗಿದ್ದನು.

ಇಂತಹ ಸಮಯದಲ್ಲಿ ಕಹಳೆ ಹನುಮಪ್ಪನ ಮಗ ಮದ್ದ ಹನುಮಪ್ಪನು ತನ್ನ ತಂದೆಯ ಸ್ಥಾನದಲ್ಲಿ ನೇಮಕಗೊಂಡು, ರಾಜಾಜ್ಞೆಯಂತೆ ಕೋಟೆಯಲ್ಲಿದ್ದ ಕಹಳೆ ಬತೇರಿಯನ್ನು ವಹಿಸಿಕೊಂಡು ಅಲ್ಲಿ ನಿಂತಿದ್ದು, ಶತೃಗಳು ಆಗಮಿಸಿದರೆ ದೂರದಿಂದಲೇ ಅದನ್ನು ನಿರೀಕ್ಷಿಸಿ ಕೋಟೆಯಲ್ಲಿದ್ದ ಸೈನಿಕರಿಗೆ ಮುನ್ಸೂಚನೆ ಕೊಡುವ ಕಾರ್ಯದಲ್ಲಿ ನಿರತನಾಗಿದ್ದನು. ಇವನು ಶತೃಗಳು ಆಗಮಿಸುವ ದಿಕ್ಕನ್ನು ಸೂಚಿಸಿ ತನ್ನ ಕಹಳೆಯನ್ನು ಸಿಡಿಲೆರಗಿದಂತೆ ಜಾಣ್ಮೆಯಿಂದ ಊದುತ್ತಿದ್ದನೆಂದು ಈ ಮನೆತನದವರು ಈಗಲೂ ಮಾತನಾಡುತ್ತಾರೆ.

ಮೈಸೂರು ಅರಸರನ್ನು ಮೂಲೆಗೊತ್ತಿ ಸರ್ವಾಧಿಕಾರಿಯಾದ ಹೈದರಾಲಿಯು ಅನೇಕ ಪಾಳೆಯಗಾರರನ್ನು ಕುತಂತ್ರದಿಂದ ಸದೆಬಡಿದು ಚಿತ್ರದುರ್ಗದ ಪಾಳೆಗಾರರ ಕಡೆಗೂ ತನ್ನ ಗಮನ ಹರಿಸಿದನು. ಶಿರಾದ ಪಾಳೆಗಾರರನ್ನು ಸೋಲಿಸಿ ಚಿತ್ರದುರ್ಗದತ್ತ ಧಾವಿಸಿದನು. ಅವನ ಸೈನ್ಯವು ಚಿತ್ರದುರ್ಗದ ಪೂರ್ವದಿಕ್ಕಿನಲ್ಲಿರುವ ಮಾವಿನ ತೋಪಿನಲ್ಲಿ ಬೀಡು ಬಿಟ್ಟಿತು. ಹೈದರನು

ಆಕ್ರಮಣಗೈಯ್ಯಲು ಸಮಯ ಕಾಯತೊಡಗಿದನು. ಈ ಕಾರ್ಯದಲ್ಲಿ ಚಿತ್ರದುರ್ಗದ ಅರಸರ ಉನ್ನತಿಯನ್ನು ಸಹಿಸಲಾರದ ನೆರೆಯ ಹರಪನಹಳ್ಳಿ, ರಾಯದುರ್ಗದ ಪಾಳೆಯಗಾರರೂ ಆಗಾಗ್ಗೆ ಸಂಚುನಡೆಸುತ್ತಿದ್ದು, ಹೈದರನಿಗೆ ಸಹಾಯ ನೀಡಿದರು.

ಮದಕರಿನಾಯಕನು ತನ್ನ ವಿರುದ್ಧ ದಂಡೆತ್ತಿ ಬಂದ ಹೈದರಾಲಿಯ ರಾಜ ತಂತ್ರವನ್ನು ಅರಿತನಾದ್ದರಿಂದ, ತಾನೇ ಅವನ ಮೇಲೆ ಯುದ್ಧವನ್ನು ಪ್ರಾರಂಭಿಸುವ ಬದಲು ಅವನೇ ತನ್ನ ಮೇಲೆ ಬಿದ್ದಾಗ ಪರಾಕ್ರಮವನ್ನು ತೋರಿಸುವುದು ಚಿತವೆಂದು ತೀರ್ಮಾನಿಸಿ, ಕೋಟೆ ಬಾಗಿಲುಗಳನ್ನು ಭದ್ರಪಡಿಸಿ ಸೈನಿಕರ ಕಾವಲನ್ನು ಬಿಗಿಗೊಳಿಸಿದನು. ಇದನ್ನರಿತ ಹೈದರನು ಕೋಟೆಯೊಳಗೆ ಹೋಗುವ ಎಲ್ಲಾ ವಿಧದ ಆಹಾರ ಸಾಮಾಗ್ರಿಗಳ ಸಾಗಾಣಿಕೆಯನ್ನು ತಡೆದನು. ಹೀಗೆ ದಿವಸಗಳುರುಳಿ ಮಾಸಗಳು ಕಳೆದರೂ ಚಿತ್ರದುರ್ಗ ಪಟ್ಟಣಿಗರಿಗೆ ಯಾವ ಕೊರತೆಯೂ ಉಂಟಾಗಲಿಲ್ಲ. ಏಕೆಂದರೆ ಹತ್ತಾರು ವರ್ಷಗಳ ಕಾಲ ಶತೃದಾಳಿ ಇದ್ದರೂ ಸಾಕಾಗುವಷ್ಟು ಆಹಾರ ಧಾನ್ಯಗಳ ಶೇಖರಣೆ ಕೋಟೆಯಲ್ಲಿದ್ದಿತು: ಎಂದೆಂದೂ ಜಲಬತ್ತಿ ಹೋಗದ ಕೊಳಗಳಿದ್ದವು. ಇದರ ಮರ್ಮವನ್ನರಿತ ಹೈದರನು ಕೋಪಗೊಂಡು ಕೋಟೆಯನ್ನು ಕೆಡವಲೋಸುಗ ಫಿರಂಗಿಗಳನ್ನುಪಯೋಗಿಸುವಂತೆ ಆಜ್ಞೆ ಮಾಡಿದನು. ಆದರೆ ಕೋಟೆಯನ್ನು ಕಿಂಚಿತ್ತು ಕದಲಿಸಲಾಗಲಿಲ್ಲ. ಇದರಿಂದ ಹೈದರನಿಗೆ ಆಶಾಭಂಗವಾದರೂ ತನಗೆ ಸಹಾಯವನ್ನು ನೀಡಲು ಬಂದಿದ್ದ ಹರಪನಹಳ್ಳಿ ಮತ್ತು ರಾಯದುರ್ಗದ ಪಾಳೆಯಗಾರರೊಂದಿಗೆ ಸಮಾಲೋಚಿಸಿ ಈ ಕೋಟೆಗೆ ಎಲ್ಲೋ ಗುಪ್ತದ್ವಾರವಿರಬೇಕೆಂದೂ, ಅದನ್ನು ಪತ್ತೆ ಮಾಡಲು ನಿಪುಣರಾದ ಗುಪ್ತಚಾರರನ್ನು ನಿಯಮಿಸಬೇಕೆಂದೂ ಸಲಹೆ ನೀಡಿದನು. ಕಡೆಗೂ ಹೈದರನ ಊಹೆ ಸತ್ಯವಾಯಿತು ಕೋಟೆಯ ಉತ್ತರ ಭಾಗದಲ್ಲಿ ಕಲ್ಲುಗಳ ಸಂದಿಯಲ್ಲಿ ಗುಪ್ತದ್ವಾರವಿರುವುದನ್ನು ಗಮನಿಸಿದರು. ಒಂದು ದಿನ ಮೊಸರು ಮಾರುವವಳು ಒಂದು ಬೃಹತ್ ಬಂಡೆಯ ಕಿಂಡಿಯಿಂದ ನುಸುಳಿ ಕೋಟೆಯೊಳಗೆ ಹೋದದ್ದನ್ನು ನೋಡಿದರು (ಪಾಂಡುರಂಗರಾಯರು ೨೦೦೮:೪೪)

ಆ ಕೂಡಲೇ ಹೈದರನು ತನ್ನ ಸಾಮಂತ ಪಾಳೆಯಗಾರರನ್ನು ಕರೆಯಿಸಿ ಮುಂದಿನ ಸಮರದ ಬಗ್ಗೆ ಚರ್ಚಿಸಿದನು. ರಾಯದುರ್ಗ ಮತ್ತು ಹರಪನಹಳ್ಳಿಯ ಸೈನಿಕರು ಕೋಟೆಯ ಕಳ್ಳಗಂಡಿಯಿಂದ ಕಹಳೆಯವನು (ಕಹಳೆ ಮದ್ದಹನುಮಪ್ಪನು) ಎಂದಿನಂತೆ ಮಧ್ಯಾಹ್ನ ಹನ್ನೆರಡು ಗಂಟೆಯ ನಂತರ ಕಿಂಡಿಯ ಬಳಿಯಿರುವ ಬತೇರಿಯ ಮೇಲೆ ಒಂದು ತಾಸು ಇಲ್ಲದಿರುವ ಕಾಲದಲ್ಲಿ ಕೋಟೆಯ ಒಳ ಹೊಕ್ಕು ದಾಳಿಮಾಡುತ್ತಾ ಹೆಬ್ಬಾಗಿಲುಗಳನ್ನು ತೆರೆಯುವುದೆಂದೂ. ಆ ಸಮಯದಲ್ಲಿ ಹೈದರನ ಸುಸಜ್ಜಿತ ಸೈನ್ಯವು ಕೋಟೆಯನ್ನು ಸುತ್ತುವರಿದು ಲಗ್ಗೆ ಹತ್ತುವುದೆಂದೂ ನಿರ್ಧಾರವಾಯಿತು. ಅಷ್ಟು ದಿವಸ ಯುದ್ಧವಿಲ್ಲದೆ ಆಲಸಿಗಳಾಗಿದ್ದ ಹೈದರನ ಸೈನಿಕರು ಭೀಕರ ಯುದ್ಧ ಸಿದ್ಧತೆಯಲ್ಲಿ ಮಗ್ನರಾದರು.

ಹರಪನಹಳ್ಳಿ ಮತ್ತು ರಾಯದುರ್ಗದ ಸೈನಿಕರು ತಮ್ಮ ಪೂರ್ವ ನಿರ್ಧಾರದಂತೆ ಸಮರ್ಥ ದಂಡನಾಯಕನೊಬ್ಬನ ಮುಂದಾಳುತನದಲ್ಲಿ ಕೋಟೆಗೆ ಉತ್ತರ ದಿಕ್ಕಿನಲ್ಲಿದ್ದ ಕಳ್ಳಗಂಡಿ ಸಮೀಪದಲ್ಲಿಯೇ ಅವಿತುಕೊಂಡು, ಕಹಳೆಯವನು ನಿತ್ಯದಂತೆ ಮದ್ಯಾಹ್ನದ ಊಟಕ್ಕಾಗಿ ನಿರ್ಗಮಿಸುವುದನ್ನು ಕಾಯುತ್ತಿದ್ದರು. ಅಂತೆಯೇ ತನ್ನ ಊಟದ ಸಮಯವಾದಾಗ ಕಹಳೆಯವನು ಕಳ್ಳಗಂಡಿಯ ಸಮೀಪದಲ್ಲಿದ್ದ ತನ್ನ ಮನೆಗೆ ಊಟಕ್ಕೆ ಹೋದನು ಆ ಕೂಡಲೇ ದಳಪತಿಯು ತನ್ನ ಸೈನಿಕರನ್ನು ಕಳ್ಳಗಂಡಿಯಿಂದ ಕೋಟೆಯೊಳಗೆ ಪ್ರವೇಶಿಸುವಂತೆ ನಿರ್ದೇಶಿಸಿದನು. ಆ ಕಳ್ಳಗಂಡಿಯ ಮುಖಾಂತರ ಒಬ್ಬನು ಮಾತ್ರ ನುಸುಳಿಕೊಂಡು ಹೋಗಬಹುದಾಗಿತ್ತು.

ಇತ್ತ ಊಟಮಾಡಲೆಂದು ಬಂದ ತನ್ನ ಪತಿಗೆ ಓಬವ್ವ ಊಟಕ್ಕೆ ಬಡಿಸಿ, ಕುಡಿಯಲು ನೀರು ಕೊಡಬೇಕೆಂದು ಬಿಂದಿಗೆಯಲ್ಲಿ ನೋಡಿದರೆ ಅದು ಬರಿದಾಗಿದ್ದಿತು. ಬೇಗನೆ ಮನೆಯ ಸಮೀಪದಲ್ಲಿದ್ದ ಸಿಹಿನೀರಿನ ಕೊಳಕ್ಕೆ ಬಂದು ಬಿಂದಿಗೆಯಲ್ಲಿ ನೀರನ್ನು ತುಂಬಿಕೊಂಡು ಹೊರಡಲನುವಾದಳು. ಕೋಟೆಯ ಒಳಭಾಗದಲ್ಲಿದ್ದ ಈ ಕೊಳಕ್ಕೂ ಮತ್ತು ಕಳ್ಳಗಂಡಿಗೂ ಕೆಲವೇ ಗಜಗಳ ಅಂತರ ಕೋಟೆಯ ಹೊರಭಾಗದಿಂದ ಜನಗಳ ಗಲಾಟೆಯೂ, ಕತ್ತಿಗಳ ಝಣತ್ಕಾರವೂ ಆಕೆಯ ಕಿವಿಗೆ ಬಿದ್ದವು. ಆಕೆ ಆಶ್ಚರ್ಯಪಟ್ಟು ಮರೆಯಲ್ಲಿ ನಿಂತು ಕಳ್ಳಗಂಡಿಯ ಮುಖಾಂತರ ಇಣಿಕಿ ನೋಡಿದರೆ ಸಾಲುಸಾಲಾಗಿ ಆಯುಧಪಾಣಿಗಳಾಗಿ ನಿಂತಿರುವ ಶತ್ರು ಸೈನಿಕರು ಆಕೆಯ ದೃಷ್ಟಿಗೆ ಬಿದ್ದರು. ಮುಂದೊದಗಬಹುದಾದ ಅಪಾಯವನ್ನು ಆಕೆ ಗ್ರಹಿಸಿದಳು.

ತನಗರಿವಿಲ್ಲದಂತೆಯೇ ತ್ವರಿತವಾಗಿ ಮನೆಗೆ ಹಿಂದಿರುಗಿ ತನಗೆ ತಕ್ಷಣವೇ ಗೋಚರಿಸಿದ ಒನಕೆಯನ್ನು ಕೈಗೆ ತೆಗೆದುಕೊಂಡು ಊಟಮಾಡುತ್ತಿದ್ದ ಪತಿಗೂ ಸಹ ಏನೊಂದೂ ತಿಳಿಸದೆ ಕಳ್ಳಗಂಡಿಯತ್ತ ಧಾವಿಸಿದಳು: ವೀರಗಾಸಿ ಬಿಗಿದು ರಣ ದುರ್ಗಿಯಂತೆ ಕಿಂಡಿಯ ಬಳಿ ನಿಂತಳು. ಇವೆಲ್ಲವೂ (ಕಮಲಾಹಂಪನಾ ೨೦೦೧:೩೧) ಕ್ಷಣಾರ್ಧದಲ್ಲಿ ನಡೆದುಹೋದವು. ಹರಪನಹಳ್ಳಿ ದಂಡನಾಯಕನ ಅಪ್ಪಣೆಯಂತೆ ಸೈನಿಕರು ಒಬ್ಬೊಬ್ಬರಾಗಿ ಕಳ್ಳಗಂಡಿಯ ಮುಖಾಂತರ ಪ್ರವೇಶಿಸಲು ಸನ್ನದ್ಧರಾಗಿ, ಮೊದಲನೆಯವನು ಆ ಕಿಂಡಿಯಲ್ಲಿ ನುಸುಳಿಕೊಂಡು ಕೋಟೆಯ ಒಳಭಾಗಕ್ಕೆ ಬಂದು ತಲೆ ಎತ್ತುವಷ್ಟರಲ್ಲಿ ಶಕ್ತಿಸ್ವರೂಪಿಣಿಯಂತೆ ನಿಂತಿದ್ದ ಓಬವ್ವೆಯ ಒನಕೆ ಪೆಟ್ಟು ಅವನ ತಲೆಯನ್ನು ಛಿದ್ರಗೊಳಿಸಿತು. ತಕ್ಷಣವೇ ಇನ್ನೊಂದು ಕೈಯಿಂದ ಅವನನ್ನು ಪಕ್ಕಕ್ಕೆ ಎಳೆದುಹಾಕುವಷ್ಟರಲ್ಲಿ ಮತ್ತೊಂದು ತಲೆ ಕಾಣಿಸಿತು. ಇದಕ್ಕೂ ಅದೇ ಗತಿಯಾಯಿತು. ಮತ್ತೊಂದು ತಲೆ–ಹೀಗೆ ಸತತವಾಗಿ ಸೈನಿಕ ತಲೆಗಳನ್ನು ಒನಕೆಯಿಂದ ಬಡಿದು ಪಕ್ಕಕ್ಕೆ ಎಳೆದು ಹಾಕುತ್ತಿರುವಂತೆಯೇ ಹೆಣದ ರಾಶಿಯೇ ಬಿದ್ದಿತು. ರಣದುರ್ಗಿಯಾಗಿ, ಮೈಯೆಲ್ಲಾ ರಕ್ತಮಯವಾಗಿದ್ದರೂ ಅಂಜದೆ, ಹರಪನಹಳ್ಳಿಯ ಸೈನಿಕರನ್ನು ಬಲಿತೆಗೆದುಕೊಳ್ಳತೊಡಗಿದಳು.

ತಲೆಯೊಡೆದು ಸತ್ತ ಸೈನಿಕರಿಂದ ಚಿಮ್ಮಿದ ರಕ್ತ ನಿಧಾನವಾಗಿ ಕಲ್ಲುಸಂದುಗಳಲ್ಲಿ ಹರಿದು ಶತ್ರುಸೈನಿಕರು ನಿಂತಿದ್ದ ಸ್ಥಳದವರೆಗೂ ಬಂದಿತು. ಸಾಕಷ್ಟು ಸೈನಿಕರು ಒಳಕ್ಕೆ ನುಸುಳಿದರೂ ಅವರ ಸುಳಿವೇ ಸಿಕ್ಕದಾಗಿ, ಅವರೆಲ್ಲರೂ ಏನು ಮಾಡುತ್ತಿರುವರೆಂದು ಯೋಚಿಸುತ್ತಿದ್ದ ದಂಡನಾಯಕನು ಆ ರಕ್ತದ ಕೋಡಿಯನ್ನು ಕಂಡು ಬರಬಡಿದವನಂತಾದನು. ಭ್ರಮೆ ಹಾಗೂ ಭಯಗಳಿಂದ ಸಂದರ್ಭವೇನೆಂಬುದನ್ನು ಅರಿಯಲು ಕಳ್ಳಗಂಡಿಯನ್ನು ಪ್ರವೇಶಿಸದೆ ಅದರಲ್ಲಿ ಇಣಕಿ ನೋಡಿದನು. ಹೆಣ್ಣೊಬ್ಬಳು ರೌದ್ರಾತಾರವನ್ನು ತಾಳಿ ಕೈಯಲ್ಲಿ ಒನಕೆ ಹಿಡಿದು ಅವಡುಗಚ್ಚಿ, ಕಣ್ಣುಗಳಲ್ಲಿ ಕೆಂಡಕಾರುತ್ತಾ ಕಿಂಡಿಯಲ್ಲಿ ತೂರಿಬರುವ ಸೈನಿಕರನ್ನು ಸದೆಬಡಿಯಲು ಕಾತರಳಾಗಿರುವ ಇದಾವುದನ್ನೂ ಅರಿಯದ ರಾಯದುರ್ಗದ ಸೈನಿಕರೂ ಸಹ ಆ ಕಳ್ಳಗಂಡಿಯಲ್ಲಿ ನುಗ್ಗಿ ಓಬವ್ವೆಯ ಒನಕೆ ಪೆಟ್ಟಿನಿಂದ ಹತರಾದರು.

ಇತ್ತ ಊಟ ಮುಗಿಸಿದ ಮದ್ದಹನುಮಪ್ಪನು ನೀರುತರಲು ಹೋದ ತನ್ನ ಪತ್ನಿ ಓಬವ್ವೆ ಇನ್ನೂ ಏಕೆ ಬರಲಿಲ್ಲವೆಂದು ಯೋಚಿಸಿ, ಸಿಹಿನೀರಿನ ಕೊಳದ ಹತ್ತಿರ ಬಂದು ನೋಡಲು ತುಂಬಿದ್ದ ಬಿಂದಿಗೆ ಮಾತ್ರ ಅಲ್ಲಿ ಕಾಣಿಸಿತು. ಏನೋ ಅಚಾತುರ್ಯ ನಡೆದಿದೆಯೆಂದು ಭಾವಿಸಿದ ಅವನು ಕಳ್ಳಗಂಡಿಯ ಸಮೀಪಕ್ಕೆ ಬಂದನು. ಓಬವ್ವೆ ಅಲ್ಲಿ ನಿಂತು ಎಸಗುತ್ತಿದ್ದ ಭಯಾನಕ ಕಾರ್ಯವು ಅವನಿಗೆ ಗೋಚರಿಸಿತು. ಆಕೆ ವೀರಾವೇಶದಿಂದ ಶತ್ರುಗಳನ್ನು ಸಂಹರಿಸುತ್ತಿರುವುದನ್ನು ನೋಡಿ ಅಘಾತಗೊಂಡು ಅವಳ ಬಳಿಗೆ ಸಾರಿದನು. ಓಬವ್ವೆ ತನ್ನ ಪತಿಯನ್ನು ತಕ್ಷಣ ಗುರುತಿಸದೆ ಅವನನ್ನು ಶತ್ರುವೆಂದು ಭಾವಿಸಿ ಒನಕೆಯನ್ನು ಮೇಲೆತ್ತಿ ಒಡಿಯುವಷ್ಟರಲ್ಲಿ ಅವನು ತಪ್ಪಿಸಿಕೊಂಡು ಬತೇರಿಯನ್ನೇರಿ, ಶತ್ರುಗಳ ಮುತ್ತಿಗೆ ಉತ್ತರ ದಿಕ್ಕಿನಿಂದ ಪ್ರಾರಂಭವಾಗಿದೆಯೆಂಬ ಸೂಚನೆಯನ್ನು ತನ್ನ ಕಹಳೆ ಮೊಳಗಿಸುವುದರ ಮೂಲಕ ಸಾರಿದನು (ವೆಂಕಟೇಶಯ್ಯ ೧೯೭೧:೭೮). ಕ್ಷಣಾರ್ಧದಲ್ಲಿ ಶಸ್ತ್ರಸಜ್ಜಿತರಾದ ಮದಕರಿನಾಯಕನ ಸೈನಿಕರು ಅಲ್ಲಿಗೆ ಧಾವಿಸಿಬಂದು ಅಳಿದುಳಿದ ಕೆಲವು ಸೈನಿಕರನ್ನು ಸದೆಬಡಿದರು. ಚಿತ್ರದುರ್ಗಕ್ಕೆ ಒದಗಿದ ಗಂಡಾಂತರವನ್ನು ಪರಿಹರಿಸಿದರು. ಓಬವ್ವೆಯಾದರೋ ದೇಹಾಲಸ್ಯದಿಂದ ದಣಿದು, ಮನೋಘಾತಕ್ಕೆ ಒಳಗಾಗಿ ಅಲ್ಲಿಯೇ ಮೂರ್ಛಿತಳಾಗಿದ್ದಳು. ಮೂರ್ಛೆಹೋದ ಆಕೆಯನ್ನು ನೇರವಾಗಿ ಅರಮನೆಗೆ ಎತ್ತಿಕೊಂಡು ಹೋದರು.

ತನಗಾದ ಅಪಾರ ನಷ್ಟ ಮತ್ತು ಸೋಲಿನಿಂದ ಹೈದರನು ನೊಂದುಕೊಂಡರೂ, ಓರ್ವ ನಾರಿಯ ಅಸಾಧರಣ ಶಕ್ತಿಯ ವಿವರಣೆಯನ್ನು ಕೇಳಿ ಬೆರಗಾದನು. ತನ್ನ ಉದ್ದೇಶ ಈಡೇರದಿದ್ದಕ್ಕೆ ಹೈದರನು ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದನು.

ಮನೋಘಾತಕ್ಕೆ ಒಳಗಾಗಿದ್ದ ಓಬವ್ವಳಿಗೆ ಕೆಲವು ತಾಸು ಕಳೆದರೂ ಸ್ಮೃತಿ ಬರಲಿಲ್ಲ. ನಾಯಕನೂ, ರಾಯಸದವರೂ, ಪರಿಚಾರಕರೂ, ಆಕೆಯ ಬಂಧುವರ್ಗದವರೂ ನೀಡಿದ

ಉಪಚಾರದಿಂದ ಆಕೆ ಎಚ್ಚರಗೊಂಡಳು: ಸಮೀಪದಲ್ಲಿದ್ದ ನಾಯಕನನ್ನು ಕಂಡು ಆ ಸ್ಥಿತಿಯಲ್ಲಿಯೇ ಅವನಿಗೆ ವಂದಿಸಿದಳು.

ಚಿತ್ರದುರ್ಗ ಇತಿಹಾಸದಲ್ಲಿ ಈ ಮಹಾಘಟನೆ ನಡೆದದ್ದು (ದಾಖಲೆಯ ಪ್ರಕಾರ) ಶಾ.ಶ ೧೭೬೯ ನಳನಾಮ ಸಂವತ್ಸರ, ಮಾರ್ಗಶಿರ ಮಾಸ.

ಚಿತ್ರದುರ್ಗವನ್ನು ಶತೃಗಳಿಂದ ಪಾರುಮಾಡಿದ ಓಬವ್ವೆಯ ಬಗ್ಗೆ ಪ್ರಜೆಗಳೂ, ರಾಜಮನೆತನದವರೂ, ಗುರುಜಂಗಮರೂ ಹೊಗಳಿ ಹರಸಿದುದು ಸಹಜವೇ ರಾಜಾ ವೀರಮದಕರಿನಾಯಕನು ಧರ್ಮಾಧಿಪತಿಗಳಿಂದಲೂ, ಪುರ ಪ್ರಮುಖರಿಂದಲೂ ಕೂಡಿದ ರಾಜಸಭೆಯಲ್ಲಿ ಓಬವ್ವೆಯ ಶೌರ್ಯ, ಸಾಹಸಗಳನ್ನು ಕೊಂಡಾಡಿ, ಅತ್ಯಂತ ಸಂತೋಷದಿಂದ 'ಏನುಬೇಕು' ಎನ್ನಲು, 'ತನಗೆ ಸಂಸ್ಥಾನದ ಧೊರೆಗಳು ಕೊಟ್ಟಿದ್ದು ಸಮಸ್ಥವೂ ಇದೆ. ನನ್ನ ಹೆಸರಿನ ಮೇಲೆ ಈ ಸುತ್ತಿನ ಕೋಟೆಯನ್ನು ಕಟ್ಟಿಸಬೇಕು......' ಎಂದು ಓಬವ್ವೆ ನಾಯಕನಲ್ಲಿ ಬಿನ್ನವಿಸಿಕೊಂಡಳು. ಆಕೆಯ ಮಾತಿನಂತೆ 'ಶಖ ೧೬೯೧ನೇ ವ್ಯಯ ಸಂ ದ ಭಾದ್ರಪದ ಮಾಸದಲ್ಲಿ ಇಕೆಯ ಹೆಸರಿನಲ್ಲಿ ವನಿಕೆ ಕೆಂಡಿ ಬಾಗಿಲಸುತ್ತ ಕೋಟೆ ಕೊತ್ತಲ ಸಹ ಹೊಸದಾಗಿ ಕಟ್ಟಿಸಿದರು. ಈ ಓಬಿಯ ಪ್ರತಿಮೆಯನ್ನು ಕಲ್ಲಿನಲ್ಲಿ ಕೆತ್ತಿಸಿ ಆ ಕಂಡಿಯ ಹತ್ತಿರ ಕೋಟೆಯಲ್ಲಿ ಯಿರಿಸಲು ಅಪ್ಪಣೆ ಮಾಡಿರುತ್ತಾರೆ.'

ಮದಕರಿನಾಯಕನು ಆಕೆಯ ಬೇಡಿಕೆಗಳನ್ನು ಚಾಚೂ ತಪ್ಪದೆ ಈಡೇರಿಸಿಕೊಡುವುದಾಗಿ ಭರವಸೆಯನ್ನಿತ್ತುದಲ್ಲದೆ, ಸ್ವಯಂ ಪ್ರೇರಿತನಾಗಿ ಅಗಸನಕಲ್ಲು ಗ್ರಾಮವನ್ನು ಆಕೆಗೆ ಜಹಗೀರಾಗಿ ನೀಡಿ, ವಂಶಪಾರಂಪರ್ಯವಾಗಿ ಅದನ್ನು ಅನುಭವಿಸಿಕೊಂಡು ಬರುವಂತೆ ಬರೆಯಿಸಿಕೊಟ್ಟನು. ಆಕೆಯನ್ನು ಪೇಟೆಯಲ್ಲಿ ಮೆರವಣಿಗೆ ಮಾಡಿಸಿದನು. ಚಿತ್ರದುರ್ಗ ಸಂಸ್ಥಾನದಲ್ಲಿಯೂ, ಅದರ ಆಶ್ರಿತ ಸಂಸ್ಥಾನಗಳಲ್ಲಿ ನಡೆಯುವ ಎಲ್ಲಾ ದೇವರುಗಳ ಜಲದಿ ಉತ್ಸವ ಮತ್ತು ವಿವಾಹಗಳಲ್ಲಿ 'ಓಬವ್ವೆಯ ವೀಳೆಯ'ವೆಂದು ತೆಗೆದು ವಂದಲವರ ವಂಶಜರಿಗೆ ಕೊಡಬೇಕೆಂದೂ ಮತೀಯ ಸುಧಾರಣೆ ಮಾಡಿದರು. ಇದು ಈಗಲೂ ಈ ವಂಶಜರಿಗೆ ದೊರೆಯುತ್ತಿದೆ.

ರಾಜಪುರಸ್ಕಾರ, ಪ್ರಜೆಗಳ ಅಪಾರ ಗೌರವಗಳನ್ನು ಪಡೆದು ಕೆಲವು ದಿವಸಗಳ ನಂತರ ಓಬವ್ವೆಯ ದೈನಂದಿನ ಜೀವನದಲ್ಲಿ ಕೊಂಚ ಮಾರ್ಪಾಡಾಯಿತು. ಬಹುಶಃ ತನ್ನ ಸ್ವಂತ ಕೈಯಿಂದ ಘಟಿಸಿದ ಅಸಂಖ್ಯಾತ ಶತೃ ಸೈನಿಕರ ಕೊಲೆಯ ದೃಶ್ಯ ಆಕೆಯನ್ನು ಬಹುವಾಗಿ ನೋಯಿಸಿದ್ದಿರಬಹುದು; ಮನಸ್ಸಿನ ಮೇಲೆ ಭೀಕರ ಪರಿಣಾಮ ಬೀರಿರಬಹುದು. ಅಂತೂ ಆಕೆಯಲ್ಲಿ ವಿಚಿತ್ರ ಲಕ್ಷಣಗಳು ಕಾಣಲಾರಂಭಿಸಿದವು. ಮೌನಿಯಾಗಿಯೂ, ಕೆಲವೊಮ್ಮೆ ಅಲ್ಪಭಾಷಿಯಾಗಿಯೂ, ನಿರುತ್ಸಾಹಿಯಾಗಿಯೂ ಜೀವನ ನಡೆಸುತ್ತಿದ್ದ ಈ ಅವಧಿಯಲ್ಲಿಯೇ

ಆಕೆ ಒಬ್ಬ ಸುಪುತ್ರನನ್ನು ಪಡೆದಳು. ಕ್ರಮೇಣ ಆಕೆಯ ವರ್ತನೆಯಲ್ಲಿ ಬಹಳ ಬದಲಾವಣೆಗಳಾದವು. ಕೆಲವು ಬಾರಿ ಆಕೆ ಅಪ್ರಾಸಂಗಿಕ ಮಾತುಗಳನ್ನಾಡುವುದು, ಇಲ್ಲವೆ ಅಕಾರಣ ಕೋಪ–ತಾಪಗಳ ಪ್ರದರ್ಶನ ಮಾಡುವುದು ಪ್ರಾರಂಭವಾಯಿತು. ಹೀಗಿದ್ದರೂ ತನ್ನ ಏಕೈಕ ಪುತ್ರನನ್ನು ಆಕೆ ಎಂತಹ ಸಂದರ್ಭದಲ್ಲಿಯೂ ಮರೆಯದೆ ಮಮತೆಯಿಂದ ಕಾಪಾಡಿಕೊಂಡು ಬಂದಳು. ಅಂತೂ ಓಬವ್ವೆಯ ಜೀವನದ ಉತ್ತರಾರ್ಧವು ಮಂಕಾಗಿಯೂ, ನಿಸ್ಸಾರವಾಗಿಯೂ ಇದ್ದು, ಶಾ.ಶ.೧೬೮೮ನೇಯ ನಳನಾಮ ಸಂವತ್ಸರ ಭಾದ್ರಪದ ಮಾಸದಲ್ಲಿ ಅಂದರೆ ಕ್ರಿ.ಶ.೧೭೬೬ರಲ್ಲಿ ಮೃತಳಾದಳು (ಶ್ರೀನಿವಾಸಮೂರ್ತಿ, ತೆಲಗಾವಿ ೧೯೭೬; ಕೃಷ್ಣಯ್ಯ ವೀರವನಿತೆ ಓಬವ್ವೆಯ ಐತಿಹಾಸಿಕತೆ ೧೦–೧೯).

ಕ್ರಿ.ಶ. ೧೭೭೯ರಲ್ಲಿ ಹೈದರಾಲಿಯು ಚಿತ್ರದುರ್ಗವನ್ನು ಆಕ್ರಮಿಸಿದನಲ್ಲದೆ, ನಾಯಕನನ್ನು ಶ್ರೀರಂಗಪಟ್ಟಣಕ್ಕೆ ಸಾಗಿಸಿದನು. ಸಂಗಡ ಸಾವಿರಾರು ನಾಯಕರನ್ನೂ ಕರೆದೊಯ್ದನು. ಮದಕರಿನಾಯಕನ ಸಂಗಡ ಇಬ್ಬರು ಬಿರುದಿನ ಕಹಳೆಯವರನ್ನೂ ಬಂಧಿಗಳನ್ನಾಗಿ ತೆಗೆದುಕೊಂಡು ಹೋದನು. ಓಬವ್ವೆ ಕುಟುಂಬಕ್ಕೆ ಸೇರಿದ ಕಹಳೆಯವರಲ್ಲಿ ಒಬ್ಬನಾದ ಬಾಲಪ್ಪನು ತನಗೆ ದೊರೆಯು ಕೊಟ್ಟಿದ್ದ ವಸ್ತುಗಳೊಡನೆ ದೊಡ್ಡ ಸಿದ್ದವ್ವನ ಹಳ್ಳಿಗೆ ಹೋಗುತ್ತಿರುವಾಗ ಕುಂಚಿಗನಹಾಳು ಕಣಿವೆಯಲ್ಲಿ ಟಿಪ್ಪುವಿನ ಸೈನಿಕರಿಂದ ಹತನಾದನು. ಅವನ ಸಮಾಧಿ ಈಗಲೂ ಅಲ್ಲಿದೆ. ದೊರೆಗಳಿಲ್ಲದ ದುರ್ಗದಲ್ಲಿ ಇರುವುದು ಅಪಾಯವೆಂದರಿತ ಕಹಳೆಯವರು ಓಬವ್ವೆಯ ಪುತ್ರನ ಸಮೇತರಾಗಿ ದೊಡ್ಡಸಿದ್ದವ್ವನ ಹಳ್ಳಿಗೆ ಬಂದು ನೆಲೆಸಿದರು. ಹಿಂದೆ ಮದಕರಿನಾಯಕನು ಈ ಮನೆತನದವರಿಗೆ ನೀಡಿದ್ದ ವಿಶೇಷ ಸೌಲಭ್ಯಗಳು ಚಿತ್ರದುರ್ಗದ ಪತನನಾಂತರ ನಿಂತುಹೋದವು.

ಮೈಸೂರು ಒಡೆಯರು ಓಬವ್ವೆ ವಂಶಸ್ಥರಿಗೆ ಜಹಗೀರು ನೀಡಿ ಗೌರವಿಸಲು ಪ್ರಯತ್ನಿಸಿದರು. ಆದರೆ ದೊಡ್ಡ ಸಿದ್ದವ್ವನಹಳ್ಳಿಯಲ್ಲಿ ಆಗ ಇದ್ದ ಶ್ಯಾನುಭೋಗರ ಸಂಕುಚಿತ ಹಾಗೂ ಸ್ವಾರ್ಥ ಮನೋಭಾವದಿಂದ ಅದು ದಕ್ಕದೇ ಹೋಯಿತು. ಓಬ್ಬವ್ವನ ವಂಶಸ್ಥರೇ ಇಲ್ಲವೆಂದು ಅವರು ಸುಳ್ಳು ವರದಿ ಮಾಡಿದರು. ಇದೀಗ ಈ ವಂಶಸ್ಥರು ನೇಯ್ಗೆಯ ಕೆಲಸ ಮತ್ತು ಭಜಂತ್ರಿಯಗಳಿಂದ ಜೀವನ ಸಾಗಿಸುತ್ತಿರುವರು.




ಕರ್ನಾಟಕದ ಇತಿಹಾಸ, ಸಂಸ್ಕೃತಿ ಕಲೆ, ಸಾಹಿತ್ಯ ಇವೇ ಮೊದಲಾದ ವಿಷಯಗಳಲ್ಲಿ ಆಳವಾಗಿ ಅಧ್ಯಯನ ಮಾಡಿದ ಕರ್ನಾಟಕದ ವಿವಿಧ ಬರಹಗಾರರ ಕೃತಿಗಳು ನಮ್ಮ ಕರ್ನಾಟಕದ ಅಪೂರ್ವವಾದ ಅನೇಕ ವಿಷಯಗಳ ಮೇಲೆ ಬೆಳಕು ಚೆಲುತ್ತವೆ. ಕರ್ನಾಟಕದ ಗತವೈಭವವನ್ನು ತಿಳಿಸಿ ಕನ್ನಡಿಗರಲ್ಲಿ ಸ್ವಾಭಿಮಾನವನ್ನು ಜಾಗೃತಿಗೊಳಿಸುತ್ತವೆ. ಭಾರತ ದೇಶದ ಇತರ ರಾಜ್ಯಗಳ ನಿವಾಸಿಗಳಲ್ಲಿ ಕನ್ನಡದ ಮಹಿಳೆಯರ ಮೇಲಿನ ಗೌರವವನ್ನು ಹೆಚ್ಚಿಸುತ್ತವೆ. ಇವುಗಳ ಪ್ರಕಾಶನದಿಂದ ಸಂಶೋಧಕ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ ಅನೇಕ ಉಪಯುಕ್ತ ಮಾಹಿತಿಯನ್ನೊದಗಿಸಿ, ಮಹಿಳಾ ಮೇಲಿನ ಹೆಚ್ಚಿನ ಸಂಶೋಧನೆಗೆ ಅನುವು ಮಾಡಿಕೊಟ್ಟಂತಾಗುತ್ತದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಅನೇಕ ಕೃತಿಗಳು, ಇನ್ನು ಹಸ್ತಪ್ರತಿ ರೂಪದಲ್ಲಿದ್ದು, ಬೆಳಕು ಕಾಣದಾಗಿವೆ. ಇಂತಹ ವಿಷಯಗಳು ನಾಶವಾಗುವ ಮೊದಲೇ ಅವುಗಳನ್ನು ಬೆಳಕಿಗೆ ತರುವುದು ಕನ್ನಡಿಗರಾದ ನಮ್ಮೆಲ್ಲರ ಕರ್ತವ್ಯವಾಗಿದೆಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಇತಿಹಾಸವೆಂದರೆ ಕೇವಲ ರಾಜ–ರಾಣಿ–ರಾಜಕುಮಾರ, ರಾಜಕುಟುಂಬದ ಚರಿತ್ರೆ, ಹೋರಾಟ, ವೈಭವ, ಅಂತೆಕಂತೆಗಳ ಕಥೆಯಲ್ಲ ಇತಿಹಾಸದ ನಿಜವಾದ ಅಧ್ಯಯನವೆಂದರೆ

ರಾಜ, ಮಹಾರಾಜರ ಚರಿತ್ರೆಯೊಂದಿಗೆ ಇತರೆ ಸಾಮಾನ್ಯ ಜನರ ಬದುಕು, ಅವರ ಸಾಧನೆ ಮತ್ತು ಸೇವೆ ಆ ಕಾಲದ ಆರ್ಥಿಕ, ಸಾಮಾಜಿಕ, ಪರಿಸ್ಥಿತಿ, ಜನಜೀವನ, ಸಾಹಿತ್ಯ, ಸಂಸ್ಕೃತಿ, ಲಲಿತಕಲೆಗಳು, ಆ ಕಾಲದ ಆವಿಷ್ಕಾರಗಳು ಮುಂತಾದವುಗಳ ಪ್ರಾಮಾಣಿಕವಾದ ಅಧ್ಯಯನವಾಗಿದೆ ಮತ್ತು ಈ ಅಧ್ಯಯನದಿಂದ ಈಗಿನ ಸಮಾಜಕ್ಕೆ ಉಪಯುಕ್ತವಾಗುವ ವಿಷಯಗಳನ್ನು ಎತ್ತಿ ತೋರಿಸುಬಹುದಾಗಿದೆ. ಜೊತೆಗೆ ಓಬವ್ವಳಿಗೆ ಸಂಬಂಧಿಸಿದಂತೆ ಅನೇಕ ಕೃತಿಗಳನ್ನು ಮೌಖಿಕ ಆಕರಗಳನ್ನು ಬಳಸಿಕೊಂಡರೂ ಅಂಶವು ಚರ್ಚಾಸ್ಪದಾವಾಗಿದ್ದಿತು. ಐತಿಹಾಸಿಕವಾಗಿ ಇವುಗಳಿಗೆ ಪೂರ್ಣ ಪ್ರಮಾಣದಲ್ಲಿ ಆಧಾರ ಸಿಗುವುದು ಕಷ್ಟ ಆದರೂ ಮೇಲಿನ ಬರಹಗಾರರ ಹೇಳಿಕೆಗಳನ್ನು ಜೊತೆಗೆ ಕೃಷ್ಣಯ್ಯ ಎ.ಡಿ. ಅವರ 'ಚಂದ್ರವಳ್ಳಿ' ಎಂಬ ಲೇಖನದಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿಷಯವನ್ನು ಪಡೆದು ಈ ಅಧ್ಯಯನ ತಯಾರಿಸಲು ಪ್ರಯತ್ನಿಸಲಾಗಿದೆ.

"ಪ್ರಪಂಚದ ಅನಂತ ದೇಶಕಾಲ ಪ್ರವಾಹದಲ್ಲಿ ಹರಿಹರಿದು ಹೊಳೆಯುತ್ತಿರುವ ಕನ್ನಡ ವಸುಂಧರೆ ! ಅಮಿತಬಲನಿಧಿ ! ಮಿಂಚು, ಬೆಳಗು, ಉರಿ, ಮೊಳಗು, ಗುಡುಗು, ಘರ್ಜಿಸು, ಸ್ಫುರಿಸು ಕನ್ನಡ ನಾಡಿನ ಅಣುರೇಣುಗಳಲ್ಲಿ ಸ್ಫುರಿಸು, ಚೈತನ್ಯಮಯವಾಗಿ ಸ್ಫುರಿಸು !!"

**ಟಿಪ್ಪಣಿಗಳು:**

೧. ಚಿತ್ರದುರ್ಗ ನಾಯಕ ಅರಸರ ಚರಿತ್ರೆಯಲ್ಲಿ ಸಾಲಾಗಿ ಕಾಣಸಿಗುವ ಘಟನೆಗಳ ಕಾಲಾನುಕ್ರಮಣಿಕೆಯನ್ನು ಇಲ್ಲಿ ವಿವರವಾಗಿ ಕೊಡಲೆತ್ನಿಸಿದ್ದರೂ ಇದು ಸಮಗ್ರವಾದುದೇನಲ್ಲ. ಇದರಲ್ಲಿ ಪ್ರಸ್ತಾಪಗೊಂಡಿರದ ಹಲವಾರು ಹೆಚ್ಚುವರಿ ಅಂಶಗಳನ್ನು ಅಭ್ಯಾಸಿಗಳು ಸದ್ಯಕ್ಕೆ ಇದರಲ್ಲಿ ಸೇರಿಸಿರುವ ಘಟನೆಗಳ ಕಾಲಾನುಕ್ರಮಣಿಕೆಯ ಭಾಗದಲ್ಲಿ ನೋಡಬಹುದು.

೨. ದಕ್ಷಿಣ ಭಾರತದಲ್ಲಿನ ಈ ನಮ್ಮ ಕನ್ನಡ ನಾಡು ಪ್ರಾಚೀನ ಕಾಲದಿಂದಲೂ ಕರ್ಣಾಟಕವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದಕ್ಕೆ ರಾಜಧಾನಿಯಾದ ಬೆಂಗಳೂರಿಗೆ ಉತ್ತರ ದಿಕ್ಕಿನಲ್ಲಿ ನೆಲೆಸಿರುವ ಜಿಲ್ಲೆಗಳ ಪೈಕಿ ಚಿತ್ರದುರ್ಗ ಜಿಲ್ಲೆಯು ಒಂದಾಗಿದೆ. ಇದಕ್ಕೆ ಮುಖ್ಯ ಪಟ್ಟಣ ಚಿತ್ರದುರ್ಗ.

೩. ಮೊಳಕಾಲ್ಮೂರಿನ ಬಳಿ ಇರುವ ಸಿದ್ಧಾಪುರದ ಅಶೋಕನ ಶಾಸನಗಳಿಂದ ಈ ಚಿತ್ರದುರ್ಗ ಜಿಲ್ಲೆಯ ಉತ್ತರ ಭಾಗವು ಮೌರ್ಯ ಸಾಮ್ರಾಜ್ಯದ ದಕ್ಷಿಣ ಎಲ್ಲೆಯಾಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೨ನೆಯ ಶತಮಾನದಲ್ಲಿ ಶಾತವಾಹನರು ನಂತರ ಕದಂಬರೂ, ಎಂಟನೆಯ ಶತಮಾನದಿಂದ ರಾಷ್ಟ್ರಕೂಟರೂ ಈ ಪ್ರದೇಶವನ್ನು ಆಳಿದರು. ರಾಷ್ಟ್ರಕೂಟರ ಕಾಲದಲ್ಲಿಯೂ ಇಲ್ಲಿ ನೊಳಂಬರು ಪ್ರಬಲರಾಗಿದ್ದರು. ೧೨ನೆಯ ಶತಮಾನದ ಹೊತ್ತಿಗೆ ಹೊಯ್ಸಳರು ತರುವಾಯ ದೇವಗಿರಿಯ ಯಾದವರು, ಈ ಪ್ರದೇಶಕ್ಕೆ ರಾಜರಾಗಿದ್ದರು. ಆಗ ಚಿತ್ರದುರ್ಗವೆಂಬ ಹೆಸರು ಇದಕ್ಕಿರಲಿಲ್ಲ. ಇದನ್ನು ಬೆಮ್ಮತ್ತನೂರ್ ಎಂದು ಕರೆಯುತ್ತಿದ್ದಂತೆ ಕಂಡುಬರುತ್ತದೆ.

೪. ೧೪ನೆಯ ಶತಮಾನದ ಆದಿಭಾಗದಲ್ಲಿ ಮಲ್ಲಿಕಾಫರನು ಉತ್ತರದಿಂದ ಬಂದು ಹಳೇಬೀಡನ್ನು ಮುತ್ತಿದನು. ಹಾಗೂ ಸುಲಿಗೆ ಮಾಡಿದನು. ಅಲ್ಲಿಂದಾಚೆಗೆ ಹಿಂದೂರಾಜರ ಶಕ್ತಿಯು ಕಾಲಕ್ರಮೇಣ ಕುಂದುತ್ತಾ ಬಂತು. ಅಂಥ ಅಧೋಗತಿಯ ಸಮಯದಲ್ಲಿ ಹಿಂದೂ ಧರ್ಮವನ್ನುಳಿಸಲು ಪ್ರಸಿದ್ಧವಾದ ವಿಜಯನಗರ ಸಂಸ್ಥಾನವು ಹಕ್ಕ-ಬುಕ್ಕರಿಂದ ೧೩೩೬ರಲ್ಲಿ ಸ್ಥಾಪಿತವಾಯಿತು. ಹಕ್ಕನೇ ಹರಿಹರರಾಯನೆಂಬ ಹೆಸರಿನಿಂದ ರಾಜನಾದ, ಪರಮಪೂಜ್ಯರಾದ ವಿದ್ಯಾರಣ್ಯರೇ ಅದಕ್ಕೆ ಮಂತ್ರಿ, ವಿಜಯನಗರ ಸ್ಥಾಪನೆಗೂ ಮುಂಚಿತವಾಗಿ ಪಾಳೆಯಗಾರರಿದ್ದರು. ಅವರು ವಿಜಯನಗರಕ್ಕೆ ಕಪ್ಪಕಾಣಿಕೆಗಳನ್ನು ಒಪ್ಪಿಸಿ ಆ ಸಾಮ್ರಾಜ್ಯದ ಆಡಳಿತಕ್ಕೊಳಗಾಗಿದ್ದರು. ಆದರೆ ವಿಜಯನಗರ ಪತನವಾದ ಮೇಲೆ (೧೫೬೫) ಕಪ್ಪಕಾಣಿಕೆಗಳನ್ನೊಪ್ಪಿಸುತ್ತಿದ್ದ ಆ ಪಾಳೆಯಗಾರರಲ್ಲಿ ಅನೇಕರು ಬಿರುದುಗಳನ್ನು ಧರಿಸಿ ಸ್ವತಂತ್ರರಾದರು. ಹೀಗೆ ಸ್ವತಂತ್ರರಾದವರಲ್ಲಿ ಚಿತ್ರದುರ್ಗ ಪಾಳೆಯಗಾರರು ಹೆಸರುವಾಸಿಯಾದರು (ವೆಂಕಟೇಶಯ್ಯ ೧೯೭೧:೭).

೫. ವಾಲ್ಮೀಕಿಗೋತ್ರದ ಶ್ರೀ ಮನ್ಮಹಾನಾಯಕ ಚಾರ್ಯ ಕಾಮಗೇತಿ ಕಸ್ತೂರಿ ಎಂಬ ಅಭಿದಾನವನ್ನು ತಮ್ಮ ಹೆಸರುಗಳೊಡನೆ ಧರಿಸಿಕೊಂಡದ್ದು ಇವರ ಶಾಸನ ಬರಹಗಳಿಂದ ವ್ಯಕ್ತಪಡಿಸುತ್ತದೆ.

ಈ ಅರಸರು ಹಗಲು ಕಗ್ಗೊಲೆಯ ಮಾನ್ಯ, ಗಂಡುಗೊಡಲಿಯ ಸರ್ಜಾ, ಚಂದ್ರಾವಿಥಲದಾಂಕ್ಯ, ಧೂಳ್‌ಕೋಟೆವಜೀರ, ಗಾದ್ರಿಮಲೆ ಹೆಬ್ಬುಲಿ, ಇತ್ಯಾದಿ ಬಿರುದುಗಳಿಂದ ಪುರಸ್ಕೃತರಾಗಿದ್ದರು.

೬. ಈ ಅರಸರು ಶತ್ರುವರ್ಗದವರನ್ನು ತಲ್ಲಣಗೊಳಿಸುವಂತಹ ಮಹಾರಣಪಂಡಿತರು ಮಾತ್ರವಲ್ಲದೆ ಮಹಾಧರ್ಮನಿಷ್ಠರೂ, ಗುರುವರ್ಗದಲ್ಲಿ ಭಕ್ತಿಯುಳ್ಳವರೂ, ಪ್ರಜಾವಾತ್ಸಲರೂ, ಪರಂಪರೆಗೆ ಧಕ್ಕೆ ಉಂಟಾಗದಂತೆ ಪಕ್ಷಪಾತರಹಿತ ರಾಜನೀತಿಯನ್ನು ರೂಪಿಸಿದ ನಿಪುಣರೂ, ಕೃಷಿ ವಾಣಿಜ್ಯ ಇತ್ಯಾದಿಗಳ ಪೋಷಕರು, ಸಂರಕ್ಷಕರೂ ಆಗಿದ್ದರು. ಇವರ ಆಡಳಿತ ಕಾಲದಲ್ಲಿ ರಾಜ್ಯದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಮೊದಲಾದ ಪರಿಸ್ಥಿತಿಗಳು ಉತ್ತಮವಾಗಿದ್ದು, ಸಹಕಾರ, ಸೌಹಾರ್ದತೆ, ಸಹನೆ ಇತ್ಯಾದಿಗಳನ್ನು ಚೆನ್ನಾಗಿ ವ್ಯಕ್ತಪಡಿಸುವಂತಹ ವಾಗಿವೆ. ಇವರು ನ್ಯಾಯನಿಷ್ಠರುರಾದರೂ ಪ್ರಜೆಗಳಿಗೆ ಹೊರೆಯೆನಿಸದ ರಾಜಧರ್ಮವನ್ನು ಪರಿಪಾಲಿಸುವರೆಂತಲೂ ಚರಿತ್ರೆಯಲ್ಲಿ ಕೊಂಡಾಡಲಾಗಿದೆ (ತೆಲಗಾವಿ ೨೦೦೯:೧–೩೭).

೭. ಓಬವ್ವ ಹೈದರಾಲಿಯ ಸೈನ್ಯವನ್ನು ಸಂಹರಿಸುತ್ತಿದ್ದಾಗ ಹಿಂಸಾಧರ್ಮವು ತಲೆಗೇರಿ ಪ್ರಳಯಾಕಾರದ ಭೈರವ ರೂಪದಂತೆ ಆಕೆಯ ಆಕಾರವು ಕರಾಳ ವಿಕರಾಲವಾಗಿತ್ತು. ಮಂತ್ರಪ್ರೇರಿತವಾದ ಮೂರ್ತಿಯಂತೆ ಆಕೆಯ ಸಂಹಾರ ಸತ್ರವು ಯಂತ್ರಗತಿಯಿಂದ ಅವಿರತವಾಗಿ ಸಾಗಿತ್ತು. ಆಕೆಯ ಎಲ್ಲ ಶಕ್ತಿಗಳು ಒಂದೇ ಒಂದಾದ ಕಂಡನ ಕಾರ್ಯದಲ್ಲಿ ಕೇಂದ್ರೀಕೃತವಾಗಿದ್ದವು. ವಿಲಯ ಸಮಾಧಿಯಲ್ಲಿ ವಿಲೀನಳಾದ ಆಕೆಯ ಕಣ್ಣಿಗೆ ಒಂದೇ ಒಂದು ರೂಪ ಕಾಣಿಸುತ್ತಿದ್ದಿತು. ಅದು ಹಗೆಯಾಗಿದ್ದಿತು. ಈ ಸಮಯದಲ್ಲಿ ಓಬವ್ವೆಯು ತನ್ನ ಗಂಡನನ್ನು ಗುರುತಿಸಲು ಸಾಧ್ಯವಾಗದಷ್ಟು ಮೈಮರೆತಿದ್ದಳು. ಕೊನೆಗೆ ಗಂಡನು ಸಹ ಶತ್ರುವಿನಂತೆ ಕಂಡನು. ಆಗ ಆತನನ್ನು ಹೊಡೆಯಲು ಹೋದಳು (ಕಮಲಾಹಂಪನಾ ೨೦೦೧:೩೮).

೮. ಅವಳು ಅಳಿದರೂ ಅವಳ ಕೀರ್ತಿ ನಮ್ಮ ನಾಡಿನಲ್ಲಿ ಉಳಿದಿದೆ. ಹಾಗೂ ವೀರತ್ಯಾಗದ ಮಾತಾಗಿವೆ (ಪಾಂಡುರಂಗರಾಯರು ೨೦೦೮:೪೯). ಇಲ್ಲಿ ನಮಗೆ ತಿಳಿಯುವುದೆಂದರೆ ಚಿತ್ರದುರ್ಗದಲ್ಲಿ ಅನೇಕ ಜಾತಿಯ ಜನರಿದ್ದರೂ ತಮ್ಮ ನಾಡಿಗಾಗಿ ಸಾಮಾನ್ಯ ಜನತೆಯು ತಮ್ಮ ಪ್ರಾಣತ್ಯಾಗ ಮಾಡುವಷ್ಟು ಕೆಚ್ಚೆದೆಯನ್ನು ಹೊಂದಿದ್ದರು. ಇಂದಿಗೂ ಸಹ ಇವಳು ಶತ್ರುಗಳನ್ನು ಸಂಹರಿಸಿದ ಸ್ಥಳವಾದ ಕಿಂಡಿಯು 'ಒನಕೆ ಓಬವ್ವನ ಕಿಂಡಿ' ಎಂಬುದಾಗಿಯೇ ಪ್ರಸಿದ್ಧವಾಗಿ ಬಳಕೆಯಲ್ಲಿದೆ. ಇವಳ ಸಾಹಸದಿಂದ ಇಡೀ ಕರ್ನಾಟಕದ ಮಹಿಳೆಯರ ಸಾಧನೆಯಲ್ಲಿ ಇವಳ ಪಾತ್ರವು ಮುಖ್ಯವಾದುದ್ದಾಗಿ ಕಾಣಬರುತ್ತದೆ. ಇಲ್ಲಿ ಸಾಧನೆಯಿಂದ ಚಿತ್ರದುರ್ಗವು ಹೈದರನ ಕೈ ವಶವಾಗುವುದನ್ನು ತಪ್ಪಿಸಿದಂತಾಯಿತು.

೯. ಶ್ರೀ ಆಲೂರರು ಹೇಳುವಂತೆ ಪತಿಯ ಸಲುವಾಗಿಯೂ ಸ್ವಾಮಿಯ ಸಲುವಾಗಿಯೂ ಮನುಷ್ಯ ತನ್ನ ಪ್ರಾಣವನ್ನು ಕೊಡಬೇಕೆಂಬ ಮಾತು ಒಂದು ಕಾಲಕ್ಕೆ ಈ ನಾಡಿನಲ್ಲಿ ಸಾಮಾನ್ಯರೆಂದು ತೋರುವವರಲ್ಲಿಯೂ ಆಳವಾಗಿ ಊರಿಕೊಂಡಿದ್ದಿತು ಎಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

೧೦. ಸ್ಥಳೀಯ ಹೇಳಿಕೆಯ ಪ್ರಕಾರ ಓಬವ್ವೆಯು ತಾನು ಕಾಲವಾದ ಮೇಲೆ ತನ್ನನ್ನು ತನ್ನ ವಂಶಜರು ಕುಲದೇವತೆಯಾಗಿ ಪರಿಗಣಿಸಬೇಕೆಂದೂ, ಉತ್ಸವ ಮಾಡೇಕೆಂದೂ ಉತ್ಸವ ಕಾಲದಲ್ಲಿ ಎಪ್ಪತ್ತೇಳು ಬಿರುದು ಬಹುಮಾನಗಳನ್ನು ಹಿಡಿಯಲು ಅನುಮತಿ ಕೊಡಬೇಕೆಂದೂ, ಈ ಉತ್ಸವಕ್ಕಾಗಿ ಪುರದ ಪ್ರತಿಯೊಂದು ಗೃಹದವರೂ ಅವರ ಯೋಗ್ಯತಾನುಸಾರ ಕಾಣಿಕೆ ಕೊಟ್ಟು ಪ್ರತಿ ಶುಭ ಮುಹೂರ್ತದಲ್ಲಿಯೂ ತನ್ನ ಹೆಸರಿನಲ್ಲಿ ಒಂದು ವೀಳೆಯವನ್ನು ಎತ್ತಿ ತನ್ನ ವಂಶಜರಿಗೆ ಕೊಡಬೇಕೆಂದೂ ಸಭೆಯಲ್ಲಿ ಭಿನ್ನವಿಸಿಕೊಂಡಳು.

ಅನಾದಿಕಾಲದಿಂದಲೂ ಮಾನವನ ನೆಲೆ ಹಾಗೂ ಚಟುವಟಿಕೆಗಳ ಕೇಂದ್ರವಾಗಿದ್ದು, ಚರಿತ್ರೆಯ ವಿವಿಧ ಮಜಲುಗಳನ್ನು ಹೊಂದಿರುವ ಚಿತ್ರದುರ್ಗವು ಕರ್ನಾಟಕದ ಇತಿಹಾಸದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಬಯಲು ಮ್ಯೂಜಿಯಂ, ಏಳು ಸುತ್ತಿನಕೋಟೆ, ಗಂಡು ಮೆಟ್ಟಿದ ನಾಡು ಎಂದೇ ಚಿರಪರಿಚಿತವಾಗಿರುವ ಚಿತ್ರದುರ್ಗ ಅಸಾಧಾರಣ ಸಾಧನೆಗಳ ಪ್ರತೀಕವಾಗಿ ಹುಟ್ಟಿಕೊಂಡ ಕಥೆಗಳು, ಕುತೂಹಲ ಕೆರಳಿಸುವಂತಹ ಕೋಟೆಗಳು, ದೇವಾಲಯಗಳು ಮುಂತಾದ ವೈಶಿಷ್ಟ್ಯತೆಯಿಂದ ನಾಡಿನುದ್ದಗಲಕ್ಕೂ ಪ್ರಸಿದ್ಧಿಯಾಗಿದೆ.

ಚಿತ್ರದುರ್ಗದಲ್ಲಿ ಆಳ್ವಿಕೆ ನಡೆಸಿರುವವರ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಏಳು–ಬೀಳಿನ ಹಾದಿಯನ್ನು ವಿವಿಧ ಮಗ್ಗಲುಗಳಿಂದ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಚಿತ್ರದುರ್ಗದಾದ್ಯಂತ ಇರುವಂತಹ ಗ್ರಾಮ ಕೋಟೆಗಳು ಗಡಿ ಕೋಟೆಗಳು, ರಾಜಧಾನಿ' ಕೇಂದ್ರ ಕೋಟೆಗಳು ಈಗಾಗಲೇ ವಿನಾಶದ ಅಂಚನ್ನು ತಲುಪಿವೆ. ಇವುಗಳು ಸಂಪೂರ್ಣವಾಗಿ ನಾಶವಾಗುವ ಮುನ್ನ ಬಿಡಿ ಬಿಡಿಯನ್ನು ಹಿಡಿ–ಹಿಡಿಯಾಗಿ ದಾಖಲಿಸಿ ಮುಂದಿನ ಪೀಳಿಗೆಗೆ ಮಾದರಿಯಾಗಿಸುವ ಸಂಕ್ಷಿಪ್ತ ಪ್ರಯತ್ನವನ್ನು ಪ್ರಸ್ತುತ ಈ ಅಧ್ಯಯನವು ಹೊಂದಿದೆ.

ಚಿತ್ರದುರ್ಗ ಎಂದರೆ ಸಾಮಾನ್ಯವಾಗಿ ನಮಗೆ ನೆನಪಿಗೆ ಬರುವುದು ದೈತ್ಯಕಾರದ ಗಿರಿದುರ್ಗ ಏಳುಸುತ್ತಿನಕೋಟೆ, ಆದರೆ ಇಂತಹ ಭವ್ಯ ಕೋಟೆಯಾಗದಿದ್ದರು ರಚನೆ, ವಿನ್ಯಾಸ ಮತ್ತು ತಂತ್ರಗಾರಿಕೆಯನ್ನು ಹೋಲುವ ಹಾಗೂ ಮಾರ್ಪಾಟಾಗಿರುವ ಕೋಟೆಗಳು ಚಿತ್ರದುರ್ಗದಾದ್ಯಂತ ಇವೆ. ಇವುಗಳ ಬಗ್ಗೆ ಇದುವರೆಗೂ ಸಂಪೂರ್ಣವಾದ ಅಧ್ಯಯನವೆ ನಡೆದಿಲ್ಲವೆಂಬುದಾಗಿ ಹೇಳಬಹುದಾಗಿದೆ. ಚಿತ್ರದುರ್ಗ ಕೋಟೆಗಳೆಂದರೆ, ಇಲ್ಲಿ ಕೇವಲ

ಪಾಳೆಗಾರರಲ್ಲದೆ, ಇತರೆ ಪಾಳೆಗಾರರು ಆಳ್ವಿಕೆ ಮಾಡಿದ್ದಾರೆ, ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಇವರು ಸಾಮಂತರಾಗಿ ಕೆಲವರು ಸ್ವತಂತ್ರವಾಗಿ ಆಳ್ವಿಕೆ ನಡೆಸಿದ್ದಾರೆ. ಚಿತ್ರದುರ್ಗದ ಪಾಳೆಗಾರರ ಕಾಲದಲ್ಲಿ ಕೋಟೆಗಳ ನಿರ್ಮಾಣ ಹೆಚ್ಚಾಗಿರುವುದು ಅಧ್ಯಯನದಿಂದ ಕಂಡುಬಂದಿದೆ.

ಇಲ್ಲಿ ಗೋಚರಿತ ಕೋಟೆ ಕೊತ್ತಲುಗಳ ಎಲ್ಲಾ ಆಯಾಮಗಳನ್ನು ಅಭ್ಯಸಿಸುವ ಮೂಲಕ ಪ್ರತಿಯೊಂದು ಕೋಟೆಯನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುತ್ತ ಅಲಕ್ಷಿತ ಕೋಟೆಗಳ ಜೊತೆಗೆ ಅನೇಕ ಬುರುಜು, ಕಾವಲು ಗೊಪುರಗಳ ಮಾಹಿತಿಯನ್ನು ಶೇಖರಿಸುವುದಾಗಿದೆ. ಈ ಭಾಗದಲ್ಲಿ ಆಳ್ವಿಕೆ ನಡೆಸಿದ ಅರಸರು ತಮ್ಮ ಆರ್ಥಿಕ ಶಕ್ತಿಯ ಇತಿಮಿತಿಯಲ್ಲಿ ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಂಡು ಸಾಮ್ರಾಜ್ಯದ ರಕ್ಷಣೆಗಾಗಿ ಮಾಡಿಕೊಂಡ ಕೋಟೆ ಕೊತ್ತಲುಗಳನ್ನು ಕಾಲಮಾನದ ಚೌಕಟ್ಟಿನಲ್ಲಿ ತಂದು ಅವುಗಳ ರಚನೆ, ಕೋಟೆಯನ್ನು ಕಟ್ಟಿದ ಉದ್ದೇಶ ತಂತ್ರಗಾರಿಕೆ, ಕೋಟೆಯ ಸ್ಥಿತಿಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಇಷ್ಟೇ ಅಲ್ಲದೆ ಈ ವ್ಯವಸ್ಥೆಗೆ ಪೂರಕವಾಗಿರುವ ಇತರೆ ಸ್ಮಾರಕಗಳಾದ ದೇವಾಲಯ, ಉಗ್ರಾಣ, ನೀರಿನ ಆಶ್ರಯ, ಮದ್ದಿನಮನೆ, ದ್ವಾರಬಾಗಿಲು, ವಸತಿನೆಲೆ, ಬುರುಜು–ಬತೇರಿ–ಕಂದಕಗಳನ್ನು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡುವ ಮೂಲಕ ಪ್ರಾದೇಶಿಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಚರಿತ್ರೆಯ ಅಧ್ಯಯನದಿಂದ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಾದ ಬೆಳವಣಿಗೆಯನ್ನು ತಿಳಿಯಬಹುದಾಗಿದೆ. ಇಂತಹ ಚರಿತ್ರೆಯ ರಚನೆಗೆ ಸಹಾಯಕವಾಗುವ ಆಕರಗಳನ್ನು ಪ್ರತಿಬಿಂಬಿಸುವ ಚಾರಿತ್ರಿಕ ಕೋಟೆಗಳು ಮತ್ತು ಸ್ಮಾರಕಗಳು ಕೆಲವೇ ಉಳಿದಿವೆ. ಅದರಲ್ಲಿ ಲಭ್ಯವಿರುವ ಇಂತಪ ಕೋಟೆ ಮತ್ತು ಅವಶೇಷಗಳಿಂದ ಇದುವರೆಗೂ ಕೇವಲ ಕರ್ನಾಟಕದ ಪ್ರಸಿದ್ಧ ರಾಜಮನೆತನಗಳ ಚರಿತ್ರೆಯನ್ನು ಮಾತ್ರ ಕುರಿತು ಅಧ್ಯಯನಿಸುವುದಾಗಿದೆ. ಆದರೆ ಇತ್ತೀಚಿನ ಕೆಲವು ದಶಕಗಳಿಂದ ಚರಿತ್ರೆಯ ಅಧ್ಯಯನದ ದೃಷ್ಟಿಕೋನ ಸಂಶೋಧನೆಯ ನಿಲುವು ಬದಲಾಗಿದೆ. ಅಂದರೆ ಪ್ರಾದೇಶಿಕ/ಸ್ಥಳೀಯ ಇತಿಹಾಸದ ಅಧ್ಯಯನದ ಬಗ್ಗೆ ಆಸಕ್ತಿ ತೋರಿಸಲಾಗಿದ್ದು ಸೂಕ್ಷ್ಮ ಅಧ್ಯಯನದ ಮೂಲಕ ಸಮಗ್ರ ಅಧ್ಯಯನ ಮಾಡುವಲ್ಲಿ ಹೆಚ್ಚಿನ ಪ್ರಯತ್ನಗಳು ನಡೆಯುತ್ತಿವೆ. ಹಾಗಾಗಿ ಇತಿಹಾಸಶಾಸ್ತ್ರದ ಬೆಳವಣಿಗೆಯ ಪರಿಣಾಮವಾಗಿ ಚರಿತ್ರೆಕಾರರಿಂದ ನಿರ್ಲಕ್ಷಿಸಲ್ಪಟ್ಟಿದ್ದು ಸ್ಥಳೀಯ ಇತಿಹಾಸಕ್ಕೆ ಚರಿತ್ರೆಯ ಅಧ್ಯಯನದಲ್ಲಿ ಹೆಚ್ಚಿನ ಮಹತ್ವವನ್ನು ದೊರಕಿಸಿಕೊಡಲಾಗಿದೆ.

ದೇಶದ ಪ್ರತಿಯೊಂದು ರಾಜ್ಯ, ಜಿಲ್ಲೆ, ಗ್ರಾಮ, ಸ್ಥಳವು ತನ್ನದೇ ಆದ ಚರಿತ್ರೆಯನ್ನು ಹೊಂದಿದ್ದು, ಆ ಚರಿತ್ರೆಯನ್ನು ಕ್ರಮಬದ್ಧ ಹಾಗೂ ವ್ಯವಸ್ಥಿತವಾಗಿ ಅಧ್ಯಯನ ಮಾಡಿ

ಪುನರ್ರಚನೆ ಮಾಡಿದರೆ ಅದನ್ನು ಸ್ಥಳೀಯ ಇತಿಹಾಸ ಎನ್ನಬಹುದು. ಆದರೆ ಭಾರತದಂತಹ ಬಹುಭಾಷಾ ದೇಶಕ್ಕೆ ಅನೇಕ ವಿದ್ವಾಂಸರುಗಳು ಅಭಿಪ್ರಾಯ ಅಂದರೆ ನಮ್ಮ ನಾಡಿನಲ್ಲಿ ಚಾರಿತ್ರಿಕವಾಗಿ ಬೆಳವಣಿಗೆ ಹೊಂದಿದ ಪ್ರದೇಶಗಳು ಯಾವುದೇ ಕೇಂದ್ರಾಡಳಿತಕ್ಕೆ ಸಂಪೂರ್ಣವಾಗಿ ಒಳಪಟ್ಟಿರಲಿಲ್ಲ. ಹಾಗಾಗಿ ಭಾರತದ ಇತಿಹಾಸವೆಂದರೆ ವಿವಿಧ ರಾಜ್ಯಗಳ, ಪ್ರದೇಶಗಳ ಇತಿಹಾಸವೇ ಹೊರತು ಕೆಲವೇ ರಾಜವಂಶಗಳ ಇತಿಹಾಸವಲ್ಲ ಎನ್ನುವುದು ಸ್ಪಷ್ಟ. ಆದ್ದರಿಂದ ಯಾವುದನ್ನು ಪ್ರಾದೇಶಿಕ ಇತಿಹಾಸವೆಂದು ಕರೆಯಲಾಗುವುದೋ ಅದನ್ನು ಸ್ಥಳೀಯ ಇತಿಹಾಸವೆಂದು ಕರೆಯುವುದು ಸೂಕ್ತವಾಗಿದೆ.

ಸ್ಥಳೀಯ ಇತಿಹಾಸ ಚರಿತ್ರೆಕಾರನಿಗೆ ಮುಖ್ಯವೆನಿಸುವ ದಾಖಲೆಗಳನ್ನು ಒದಗಿಸಿಕೊಟ್ಟು ಆ ದೇಶದ ಇತಿಹಾಸ ರಚನೆಗೆ ಒಂದು ಚೌಕಟ್ಟನ್ನು ಸೃಷ್ಟಿಸಿಕೊಡುತ್ತದೆ. ಹಾಗಾಗಿ ಇತ್ತೀಚಿನ ದಿನಗಳಲ್ಲಿ ಕರ್ನಾಟಕದಲ್ಲಿನ ಅನೇಕ ಐತಿಹಾಸಿಕ ಅಂಶಗಳು ಬೆಳಕಿಗೆ ಬರುತ್ತವೆ. ಈ ನಿಟ್ಟಿನಲ್ಲಿ ಏಷ್ಯಾ ಖಂಡದಲ್ಲಿಯೇ ಪ್ರಾಚೀನ ನೆಲೆಯಾದ ಚಿತ್ರದುರ್ಗವು ಸಹ ಈ ಸಾಲಿಗೆ ಸೇರಿರುವ ಒಂದು ಮಹತ್ವದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪ್ರದೇಶವಾಗಿದೆ.

ಪ್ರಸ್ತುತ ಅಧ್ಯಯನವು ಚಿತ್ರದುರ್ಗದ ಕೋಟೆಯನ್ನು ಗಮನಿದಲ್ಲಿರಿಸಿಕೊಂಡು ನಡೆಸಿದ ಅಧ್ಯಯನವಾಗಿದೆ. ಆಧುನಿಕ ಕರ್ನಾಟಕ ಚರಿತ್ರೆ ಬರವಣಿಗೆಯಲ್ಲಿ ಕೋಟೆಗಳನ್ನು ಕೇಂದ್ರವನ್ನಾಗಿಸಿಕೊಂಡು ನಡೆದಿರುವ ಅಧ್ಯಯನಗಳು ವಿರಳವಾಗಿರುವ ಹಿನ್ನೆಲೆಯಲ್ಲಿ ಚಿತ್ರದುರ್ಗದ ಐತಿಹಾಸಿಕ ಕೋಟೆಯ ವಿವಿಧ ಆಯಾಮಗಳನ್ನು ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ. ಈ ಕೋಟೆಗಳಿಗೆ ಸಂಬಂಧಿಸಿದಂತೆ ಲಿಖಿತ ಆಧಾರಗಳೂ ಹೇರಳವಾಗಿದ್ದರೂ, ಜನಮನದ ನೆನಪಿನಾಳದಲ್ಲಿ ಹುದುಗಿರುವ ಸಾಂಸ್ಕೃತಿಕ ಆಯಾಮಗಳೇ ಬೇರೆ. ಇಂತಹ ಆಯಾಮಗಳನ್ನು ಅರ್ಥಮಾಡಿಕೊಳ್ಳಲು ಲಭ್ಯವಿದ್ದ ಲಿಖಿತ ಆಕಾರಗಳೊಂದಿಗೆ ಮೌಖಿಕ ಆಕಾರಗಳನ್ನು ಬಳಸಿಕೊಳ್ಳಲಾಗಿದೆ. ಇದರ ಮೂಲಕ ಚಿತ್ರದುರ್ಗದ ಸಾಂಸ್ಕೃತಿಕ ಇತಿಹಾಸವನ್ನು ಐತಿಹ್ಯಗಳ ಮೂಲಕ ಅಧ್ಯಯನ ಮಾಡಲಾಗಿದೆ. ಇಂತಹ ಅಧ್ಯಯನಗಳು ಅನೇಕ ಬಾರಿ ಲಿಖಿತ ಪರಂಪರೆಯಲ್ಲಿ ಸಿಗುವ ಘಟನಾವಳಿಗಳಿಗಿಂತ ಭಿನ್ನವಾದ ಘಟನಾವಳಿಗಳನ್ನು ನಮ್ಮ ಮುಂದಿಡುತ್ತದೆ. ಅಂತಹ ಘಟನಾವಳಿಗಳನ್ನು ಪ್ರಸ್ತುತ ನಿಬಂಧವು ಐದು ಹಂತಗಳಲ್ಲಿ ದಾಖಲಿಸಲು ಪ್ರಯತ್ನ ಮಾಡಲಾಗಿದೆ.

ಮೊದಲನೆಯ ಹಂತದಲ್ಲಿ ಕೋಟೆಯ ರಚನೆಗೆ ಸಂಬಂಧಿಸಿದಂತೆ ಅಧ್ಯಯನವು ಐತಿಹ್ಯದ ಅರ್ಥ, ವಿಧಗಳು, ಕೋಟೆಯಲ್ಲಿ ಕಂಡುಬರುವ ಏಳುಸುತ್ತುಗಳು, ದ್ವಾರಬಾಗಿಲುಗಳು, ಬುರುಜು ಮತ್ತು ಕಂದಕಗಳು, ಕಾವಲುಗೋಪುರಗಳು, ಗರಡಿ ಮನೆಗಳು, ಮದ್ದಿನಮನೆ, ಕಣಜ ಮತ್ತು

ಸೈನಿಕ ವಸತಿ ನಿಲಯಗಳು, ನೀರಿನ ಆಶ್ರಯ ತಾಣಗಳು, ಕೋಟೆಯಲ್ಲಿ ಕಂಡುಬರುವ ಭಿತ್ತಿಚಿತ್ರಗಳು ಇವುಗಳ ಜೊತೆಗೆ ಮೌಖಿಕ ಕಾವ್ಯಗಳಿಗೆ ಸಂಬಂಧಿಸಿದಂತೆ ಕಂದಕ ಮತ್ತು ಕಾಲುವೆಗಳು ಯಾವ ರೀತಿಯಲ್ಲಿ ಚಿತ್ರದುರ್ಗ ಕೋಟೆಯಲ್ಲಿ ಪ್ರಮುಖ ಸ್ಥಾನವನ್ನು ವಹಿಸುತ್ತಿದ್ದವು.

ಸಮಯ ಮತ್ತು ಅಪಶಕುನದ ಬಗ್ಗೆ ಭಾರತೀಯರಿಗೆ ಅನಾದಿಕಾಲದಿಂದಲೂ ಒಲುವು ಇರುವುದನ್ನು ಗಮನಿಸಬಹುದು. ರಾಜರು ಪ್ರಜೆಗಳಾದಿಯಾಗಿ ಇವುಗಳನ್ನು ನಂಬಿದ್ದನ್ನು ನೋಡುತ್ತೇವೆ. ಚಿತ್ರದುರ್ಗದ ಸಂದರ್ಭದಲ್ಲಿ ಮದಕರಿ ನಾಯಕನಿಗೆ ಸಂಬಂಧಿಸಿದಂತೆ ಜನಪದ ಕಾವ್ಯದ ಪ್ರಕಾರವು ಅಧ್ಯಯನಿಸುವುದಾಗಿದೆ. ಚಿತ್ರದುರ್ಗದ ಬಗ್ಗೆ ಚಿಕ್ಕಮಕ್ಕಳಲ್ಲಿಯೂ ಯಾವ ರೀತಿಯ ಅಭಿಮಾನವನ್ನೊಂದಿದ್ದರೂ ಎಂಬುದಾಗಿದೆ. ಫಿರಂಗಿಗಳು ಶತ್ರುಸೈನ್ಯವನ್ನು ಯಾವ ರೀತಿಯಲ್ಲಿ ನಡುಕವನ್ನುಟ್ಟಿಸುತ್ತವೆ, ಪಾಳೆಯಗಾರರ ಶೌರ್ಯ, ಸಾಹಸ, ಹೈದರಾಲಿಯ ಮುತ್ತಿಗೆ, ಅದನ್ನು ಕಾಪಾಡಿಕೊಂಡ ಬಗೆ. ಚಿತ್ರದುರ್ಗದ ಜನತೆಗೆ ನಾಯಕರುಗಳ ಬಗ್ಗೆ ಇದ್ದ ಅಭಿಮಾನ ನಾಯಕರುಗಳನ್ನು ಹೆಬ್ಬುಲಿಗೆ ಹೋಲಿಸಿರುವುದು. ಯುದ್ಧಕ್ಕೆ ಹೊರಡುವ ಮುಂಚೆ ಅಪಶಕುನದ ಸೂಚಕಗಳು. ಮಾಯಕೊಂಡದಲ್ಲಿ ಜರುಗಿದ ಯುದ್ಧ, ನಾಯಕನಿಗಾದ ಸೋಲು ಹಾಗೂ ಮರಣ. ಚಿತ್ರದುರ್ಗ ಕೋಟೆಯ ಗಟ್ಟಿತನ, ಸುಣ್ಣ, ಗಾರೆ ಯಾವುದನ್ನು ಬಳಸದೆ ಕೇವಲ ಕಲ್ಲುಗಳ ಜೋಡಣೆಯಿಂದಲೇ ಮುಗಿಲೆತ್ತರಕ್ಕೆ ಮುಟ್ಟುವಂತಹ ಅಬೇಧ್ಯವಾದ ಕೋಟೆಗಳ ಬಗ್ಗೆ ವಿವರಣೆಯನ್ನೊಳಗೊಂಡಿದೆ.

ಎರಡನೆಯ ಹಂತದಲ್ಲಿ ಕೋಟೆಯಲ್ಲಿ ಕಂಡುಬರುವ ಪ್ರಮುಖ ದೇವಾಲಯಗಳಾದ ಬರಗೇರಮ್ಮ ದೇವಾಲಯ, ಕರಿವರ್ತಿ ಈಶ್ವರ ದೇವಾಲಯ, ಗಣಪತಿ ದೇವಾಲಯ, ಹಿಡಿಂಬೇಶ್ವರ ದೇವಾಲಯ, ಫಲ್ಗುಣೇಶ್ವರ ದೇವಾಲಯ, ವೆಂಕಟರಮಣ ದೇವಾಲಯ, ಗೋಪಾಲಸ್ವಾಮಿ ದೇವಾಲಯ, ಸಿದ್ದಪ್ಪ ದೇವಾಲಯ, ಏಕನಾಥೇಶ್ವರ ದೇವಾಲಯ, ಉತ್ಸವಾಂಬೆ ದೇವಾಲಯ, ಚನ್ನಕೇಶವ ದೇವಾಲಯ, ಬನಶಂಕರಿ ದೇವಾಲಯ, ಸಂಪಿಗೆ ಸಿದ್ದೇಶ್ವರ ದೇವಾಲಯ, ಹನುಮನ ಗುಡಿ, ಮುರುಘಮಠ, ದೀಪ ಮತ್ತು ಉಯ್ಯಾಲೆ ಸ್ತಂಭ. ಇವುಗಳ ರಚನೆ, ಐತಿಹ್ಯ ಮುಂತಾದ ವಿಚಾರದ ಜೊತೆಗೆ ಪ್ರಮುಖ ಬತೇರಿಗಳಾದ ನೆಲ್ಲಿಕಾಯಿ ಸಿದ್ದಪ್ಪನ ಬತೇರಿ, ಲಾಲ್ ಬತೇರಿ, ತುಪ್ಪದಕೊಳ ಬತೇರಿ, ಕಹಳೆ ಬತೇರಿ, ಬಸವನ ಬತೇರಿ, ಝುಂಡಾ ಬತೇರಿಗಳ ರಚನೆ, ಐತಿಹ್ಯ ಕೋಟೆಯಲ್ಲಿ ಇವುಗಳಿರುವ ಸ್ಥಳ, ಶೈಲಿ, ಇವುಗಳ ಬಳಕೆಯ ರೀತಿ ಮುಂತಾದ ವಿಚಾರಗಳನ್ನು ಚರ್ಚಿಸಲು ಪ್ರಯತ್ನಿಸಿದೆ.

ಮೂರನೆಯ ಹಂತದಲ್ಲಿ ವಿಜಯನಗರ ಅರಸರ ಅಧೀನದಿಂದ ಮುಕ್ತರಾದ ಹಲವಾರು ಪ್ರಾಂತ್ಯಗಳಲ್ಲಿ ಚಿತ್ರದುರ್ಗದ ಪ್ರಾಂತ್ಯವು ಒಂದಾಗಿದ್ದು, ಇಲ್ಲಿ ಕೋಟೆ ಕಟ್ಟಿ ಆಳಿದ ರಾಜರುಗಳಾದ ಚಿತ್ರನಾಯಕ ಮತ್ತು ತಿಮ್ಮಣ್ಣನಾಯಕನಿಂದ ಹಿಡಿದು ಹಿರೇಮದಕರಿನಾಯಕ ಮತ್ತು ರಾಜಾವೀರ

ಮದಕರಿನಾಯಕರುಗಳವರೆಗಿನ ಆಡಳಿತದ ವೈಖರಿ. ಚಿತ್ರದುರ್ಗದ ನಾಯಕರುಗಳಿಗೆ ಮದಕರಿ ಎಂಬ ಬಿರುದು ಬರುವ ಹಿನ್ನೆಲೆ ಚಿತ್ರದುರ್ಗದಲ್ಲಿ ಕೋಟೆ ಕಟ್ಟಿಸಿದುರ ಹಿನ್ನೆಲೆ, ಇವರ ಪರಾಕ್ರಮ ಚಿತ್ರದುರ್ಗದ ಜನತೆಯ ಮೇಲೆ ಇವರಿಗಿದ್ದ ಅಭಿಮಾನ, ಕೋಟೆಯನ್ನು ಹೇಗೆ ಕಟ್ಟಿಸಿಕೊಳ್ಳಬೇಕೆಂಬ ಮುಂದಾಲೋಚನೆ, ದೈವದ ಬಗ್ಗೆ ಇದ್ದ ಒಲವು, ಯುದ್ಧಕ್ಕೆ ಹೊರಡುವಾಗ ಒದಗಬಹುದಾಗ ಅಪಶಕುನಗಳು, ಸೈನ್ಯವನ್ನು ಕಟ್ಟಿಕೊಂಡು ಸುಸಜ್ಜಿತವಾಗಿ ನಡೆಸಿಕೊಂಡ ಪರಿ, ಮಾಯಕೊಂಡದಲ್ಲಿ ಜರುಗಿದ ಯುದ್ಧ, ದೊರಕಿದ ಬಿರುದುಗಳು, ಚಿತ್ರದುರ್ಗದ ಜೊತೆಯಲ್ಲಿ ಸ್ವತಂತ್ರಗೊಂಡ ಇತರೆ ಪ್ರಾಂತ್ಯಗಳೊಂದಿಗಿನ ಯುದ್ಧಗಳು, ಮರಾಠರೊಂದಿಗಿನ ಸ್ನೇಹ ಮತ್ತು ಯುದ್ಧ ಹಾಗೂ ಮುಖ್ಯವಾಗಿ ಹೈದರನ ಕುಟಿಲೋಪಾಯ ನೀತಿಗೆ ಒಳಗಾದ ನಾಯಕರಸ ಯುದ್ಧ ಹಾಗೂ ಕೋಟೆಯಲ್ಲಿ ಹೈದರಾಲಿಯ ಸೈನಿಕರ ಮುತ್ತಿಗೆಯೊಂದಿಗೆ ನಾಯಕರ ಕಡೆಯವರಿಂದಲೇ ಮೋಸ, ಕೊನೆಗೆ ಹೈದರಾಲಿಗೆ ಶರಣು, ಸಾವು, ಮುಂತಾದ ಎಲ್ಲ ವಿಚಾರಗಳನ್ನು ಅಧ್ಯಯನಿಸುವುದರ ಜೊತೆಗೆ ಕರ್ನಾಟಕದ ಇತಿಹಾಸದಲ್ಲಿಯೇ ಶೌರ್ಯಕ್ಕೆ ಹೆಸರಾದ ಹೆಂಗಳೆಯರ ಸಾಲಿಗೆ ನಿಲ್ಲುವಂತೆ ವೀರವನಿತೆ ಎನಿಸಿಕೊಂಡ ಹಾಗೂ ಹೈದರಾಲಿಯು ಕೋಟೆಗೆ ಮುತ್ತಿಗೆ ಹಾಕಿದಾಗ ತನ್ನ ಪತಿಗೆ ತಿಳಿಸದೆ ದುರ್ಗಕ್ಕೆ ಒದಗಿದ ಅಪಾಯವನ್ನು ತಪ್ಪಿಸುವ ಸಲುವಾಗಿ ನೂರಾರು ಶತ್ರು ಸೈನ್ಯವನ್ನು ಒನಕೆಯಿಂದಲೇ ಸಂಹಾರ ಮಾಡಿ ಒನಕೆ ಓಬವ್ವ ಎಂಬ ಬಿರುದನ್ನು ಹೊಂದಿದ ಓಬವ್ವಳ ಬಗ್ಗೆ ಹಾಗೂ ಅವಳ ಜೀವನ ವೃತ್ತಾಂತ ದುರ್ಗಕ್ಕೆ ಬಂದ ಪರಿ, ಶತ್ರುಗಳಿಂದ ಹೋರಾಟ, ಮರಣ, ಸಾವಿಗಿಂತ ಮುಂಚಿತವಾಗಿ ಅನುಭವಿಸಿದ ಯಾತನೆ, ಅವಳ ವಂಶದ ಬೆಳವಣಿಗೆ ಮುಂತಾದ ಎಲ್ಲಾ ವಿಚಾರಗಳನ್ನು ಈ ಹಂತದಲ್ಲಿ ತಿಳಿಸುವ ಪ್ರಯತ್ನಮಾಡಲಾಗಿದೆ.

ಈ ರೀತಿಯಾಗಿ ಚಿತ್ರದುರ್ಗದ ಕೋಟೆಯು ಎಣೆದುಕೊಂಡಿರುವ ಅಬೇಧ್ಯತೆಯನ್ನು ಅನೇಕ ಲೇಖಕರು ಮತ್ತು ಬರಹಗಾರರು ಮನಸಾರೆ ತಮ್ಮ ಗ್ರಂಥಗಳು, ಕೃತಿಗಳು, ಪ್ರಬಂಧಗಳ ಮೂಲಕ ವರ್ಣಮಯವಾಗಿ ಚಿತ್ರಿಸಿದ್ದಾರೆ. ಈ ಹಿಂದೆ ವ್ಯಕ್ತಪಡಿಸಿರುವ ಬರವಣಿಗೆಗಳಲ್ಲೆವೂ ಈ ಅಧ್ಯಯನಕ್ಕೆ ಆಧಾರವಾದವು. ಹಾಗೂ ವಿದ್ವಾಂಸರೊಂದಿಗೆ ಚರ್ಚೆ ಜೊತೆಗೆ ಪ್ರತ್ಯಕ್ಷವಾಗಿ ಚಿತ್ರದುರ್ಗದ ಕೋಟೆಗೆ ಭೇಟಿ ನೀಡುವ ಮೂಲಕ ಅನೇಕ ಮಾಹಿತಿಗಳನ್ನು ಪಡೆಯಲಾಯಿತು. ಅದರಲ್ಲಿ ಲಿಖಿತ ಮತ್ತು ಮೌಖಿಕ ಆಕರಗಳು ದೊರೆತವು. ಆದ್ದರಿಂದ ಪ್ರಸ್ತುತ ಈ ಅಧ್ಯಯನವನ್ನು ರಚಿಸಲು ಸಾಧ್ಯವಾಯಿತು. ಹಾಗೂ ಚಿತ್ರದುರ್ಗದ ಕೋಟೆಯ ಐತಿಹ್ಯಕ್ಕೆ ಸಂಬಂಧಿಸಿದಂತೆ ವಿಚಾರವನ್ನು ತಿಳಿಸಿಕೊಡಲು ಪ್ರಯತ್ನಿಸಲಾಗಿದೆ.

## ಗ್ರಂಥಋಣ

**ಪ್ರಕಟಿತ ಗ್ರಂಥಗಳು:**

೧. ಆಂಜನೇಯ ಸಿ., ಚಿತ್ರದುರ್ಗ ರಾಜಮನೆತನದ ವಂಶಾವಳಿ, ಗೌರಿ ಪ್ರಕಾಶನ, ಚಿತ್ರದುರ್ಗ, ೧೯೮೯.

೨. ಕಲಬುರ್ಗಿ ಎಂ.ಎಂ. (ಸಂ.), ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

೩. ಕಲಬುರ್ಗಿ ಎಂ.ಎಂ., ಸಮಾಧಿ ಬಲಿದಾನ, ವೀರಸ್ಮರಣ ಸ್ಮಾರಕಗಳು, ಐ.ಬಿ.ಎಚ್. ಪ್ರಕಾಶನ, ೧೯೮೦.

೪. ಕೃಷ್ಣಭಟ್ ಕೆ. (ಅನು.), ಕೌಟಿಲ್ಯನ ಅರ್ಥಶಾಸ್ತ್ರ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೨.

೫. ಕರೀಗೌಡ ಬೀಚನಹಳ್ಳಿ ಕರಕುಶಲ ಕಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೬. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೭. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ., ಕರ್ನಾಟಕದ ಇತಿಹಾಸ ದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು, ೧೯೭೦

೮. ಕೃಷ್ಣಮೂರ್ತಿ ಹನೂರು, ಜನಪದ ಮತ್ತು ಬುಡಕಟ್ಟು ಗೀತೆಗಳು, ರೇಖಾ ಪ್ರಕಾಶನ, ದಾವಣಗೆರೆ, ೧೯೯೧.

೯. ಕೃಷ್ಣಮೂರ್ತಿ ಕ.ರಾ. (ಸಂ.), ಚಿತ್ರಕಲ್ಲು ಮದಕರಿ, ಜಾನಪದ ಅಕಾಡೆಮಿ, ಬೆಂಗಳೂರು.

೧೦. ಕೃಷ್ಣಮೂರ್ತಿ ಕ.ರಾ. (ಸಂ.), ಪಾಳೆಯಗಾರರ ಪದಗಳು, ಜಾನಪದ ಅಕಾಡೆಮಿ, ಬೆಂಗಳೂರು.

೧೧. ಕೃಷ್ಣ ಎಂ.ಎಚ್., ಕರ್ನಾಟಕದ ಪೂರ್ವ ಚರಿತ್ರೆ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೫೩.

೧೨. ಕೃಷ್ಣ ಎಂ.ಎಚ್., ಎಕ್ಸವೇಷನ್ ಆಟ್ ಚಂದ್ರವಳ್ಳಿ, ಸಪ್ಲಮೆಂಟ್ ಟು ಎ.ಆರ್.ಮೈಸೂರು ಆರ್ಕಿಯೋಲಾಜಿಕಲ್ ಡಿಪೋ, ೧೯೨೯.

೧೩. ಕೃಷ್ಣಯ್ಯ ಎ.ಡಿ. (ಸಂ.), ಭಾರತದ ವೀರಮಹಿಳೆ ಒನಕೆ ಓಬವ್ವ, ಹೇಮಂತ ಪ್ರಕಾಶನ, ಮೈಸೂರು, ೧೯೭೯.

೧೪. ಕಮಲಾ ಹಂಪನಾ, ವೀರವನಿತೆ ಓಬವ್ವೆ, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು, ೨೦೦೦.

೧೫. ಗಂಡುಗಲಿ ಟಿ.ಎನ್., ಪ್ರಮುಖ ನಾಯಕ ಅರಸರು, ಮದಕರಿ ಪ್ರಕಾಶನ, ಚಿತ್ರದುರ್ಗ, ೧೯೯೫.

೧೬. ಗಿರಿಜ ಟಿ., ಚಿತ್ರದುರ್ಗ ಜಿಲ್ಲಾ ದರ್ಶನ, ರೇಖಾ ಪ್ರಕಾಶನ, ದಾವಣಗೆರೆ, ೧೯೯೧.

೧೭. ಗೋವಿಂದರಾಜು ಸಿ.ಆರ್., (ಸಂ.), ಪದವಿ ಪೂರ್ವ ಶಿಕ್ಷಣ ಇಲಾಖೆ ಅನುಮೋದಿಸಿದ ಪಠ್ಯಪುಸ್ತಕ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೧೮. ಚಂದ್ರಶೇಖರ ಕಂಬಾರ, ಕನ್ನಡ ಜಾನಪದ ವಿಶ್ವಕೋಶ, ಸಂಪುಟ–೧, ೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫.

೧೯. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಂಸ್ಕೃತಿ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೬.

೨೦. ಜೋಶಿ ಎಸ್.ಕೆ., ಕರ್ನಾಟಕದ ಕೋಟೆಗಳು (ಸಂ.), ಸೂರ್ಯಕೀರ್ತಿ, ಕೃಷ್ಣಮೂರ್ತಿ, ವಸಂತಲಕ್ಷ್ಮೀ, ೨೦೦೦.

೨೧. ತಾ.ರಾ.ಸು., ದುರ್ಗಾಸ್ತಮಾನ, ಕಾವ್ಯಾಲಯ, ಮೈಸೂರು, ೨೦೦೧.

೨೨. ತಿಪ್ಪಣ್ಣ ಮರಿಕುಂಟೆ ಬಿ., ಚಿತ್ರದುರ್ಗದ ಮತಮಾನ್ಯಗಳು, ಐತಿಹಾಸಿಕ ಚಿತ್ರದುರ್ಗ, ೧೯೭೯.

೨೩. ದಿವಾಕರ್ ಆರ್.ಆರ್., ಕನಾಟಕ ಪರಂಪರೆ ಭಾಗ–೧ & ೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೨೪. ದೇಸಾಯಿ ಪಾಂಡುರಂಗ ರಾಯರು, ಕನ್ನಡ ನಾಡಿನ ಮಿಂಚಿನ ಮಹಿಳೆಯರು, ಪನೂರರಿ ಸೆಕ್ರೆಟರಿ, ಕರ್ನಾಟಕ ಹಿಸ್ಟೋರಿಕಲ್ ರಿಸರ್ಚ್ ಸೊಸೈಟಿ, ಧಾರವಾಡ, ೨೦೦೮.

೨೫. ನಾಯಕ ಹಾ.ಮಾ., ಜಾನಪದ ಸ್ವರೂಪ, ತಳುಕಿನ ವೆಂಕಯ್ಯನ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೧.

೨೬. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ಕಾವ್ಯಾಲಯ, ಮೈಸೂರು, ೧೯೨೪.

೨೭. ಪುರುಷೋತ್ತಮ ಬಿಳಿಮಲೆ, ಐತಿಹ್ಯ ಸ್ವರೂಪ, ಲಕ್ಷಣ, ಪ್ರಕಾರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೩.

೨೮. ಪುರುಷೋತ್ತಮ ಬಿಳಿಮಲೆ, ಜಾನಪದ ಸಾಹಿತ್ಯ ಪ್ರಕಾರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೨೯. ಪ್ರಭಾಕರ ಎಸ್., ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೦. ಮೀರಸಾಬಿಹಳ್ಳಿ ಶಿವಣ್ಣ, ದುರ್ಗ ಜಾನಪದ, ಶೃತಿ ಪ್ರಕಾಶನ, ಬೆಂಗಳೂರು, ೧೯೯೨.

೩೧. ರಾಜಶೇಖರಪ್ಪ ಬಿ., ದುರ್ಗ ಶೋಧನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧.

೩೨. ರಾಜಶೇಖರಪ್ಪ ಬಿ. (ಸಂ.), ದುರ್ಗಸಿರಿ ದುರ್ಗೋತ್ಸವ ಸ್ಮರಣ ಸಂಚಿಕೆ, ಚಿತ್ರದುರ್ಗ ೧೯೯೮.

೩೩. ರಾಜಶೇಖರಪ್ಪ ಬಿ. (ಸಂ.), ಚಿತ್ರದುರ್ಗದ ಗರಡಿಗಳು, ರಾಧಾಕೃಷ್ಣ ಟಿ.ಆರ್. (ಸಂ), ಗೌರಿ ಪ್ರಿಂಟರ್ಸ್, ಚಿತ್ರದುರ್ಗ, ೧೯೯೫.

೩೪. ರಾಜಶೇಖರಪ್ಪ ಬಿ., ಮತ್ತು ಮೀರಸಾಬಿಹಳ್ಳಿ ಶಿವಣ್ಣ, ಚಿತ್ರದುರ್ಗ ನಾಯಕ ಅರಸರ ಚರಿತ್ರೆ ಮತ್ತು ಸಂಸ್ಕೃತಿ, ಕಿಶಾನ ಪ್ರಿಂಟರ್ಸ್, ಚಿತ್ರದುರ್ಗ, ೧೯೯೯-೨೦೦೧

೩೫. ರಾಜರಾಮ ಹೆಗಡೆ, ಭಾರತೀಯ ಮೂರ್ತಿಶಾಸ್ತ್ರ, ಧರ್ಮ, ದೇವತಾರಾಧನೆ ಹಾಗೂ ಸಾಂಸ್ಕೃತಿಕ ರಾಜಕೀಯದ ಐತಿಹಾಸಿಕ ವಿಶ್ಲೇಷಣೆ, ಅರಿವು ಬರಹ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೨.

೩೬. ರಾಧಾಕೃಷ್ಣಮೂರ್ತಿ, ಸಂಸ್ಕೃತ ಗ್ರಂಥಗಳಲ್ಲಿ ಕೋಟೆಗಳ ವರ್ಣನೆ, ಇತಿಹಾಸ ದರ್ಶನ, ಸಂಪುಟ-೬, ೧೯೯೦.

೩೭. ಲಕ್ಷ್ಮಣ ತೆಲಗಾವಿ, ವೆಂಕಣ್ಣಚಾರ್ ಕೆ. (ಸಂ.), ಐತಿಹಾಸಿಕ ಚಿತ್ರದುರ್ಗ, ಜಿಲ್ಲಾ ಇತಿಹಾಸ ಸಂಶೋಧನ ಮಂಡಳಿ, ಚಿತ್ರದುರ್ಗ, ೧೯೭೯.

೩೮. ಲಕ್ಷ್ಮಣ ತೆಲಗಾವಿ (ಸಂ.), ಚಿನ್ಮೂಲಾದ್ರಿ ವಾರ್ಷಿಕ ಸಂಚಿಕೆ, ಮದಕರಿ ಬಳಗ (ರಿ), ಮೈಸೂರು, ೧೯೭೭-೭೮.

೩೯. ಲಕ್ಷ್ಮಣ ತೆಲಗಾವಿ ಮತ್ತು ಇತರರು (ಸಂ.), ಚಿತ್ರದುರ್ಗ ದರ್ಶಿನಿ, ಜಿಲ್ಲಾ ಇತಿಹಾಸ ಸಂಶೋಧನ ಮಂಡಳಿ, ಚಿತ್ರದುರ್ಗ, ೧೯೮೦.

೪೦. ಲಕ್ಷ್ಮಣ ತೆಲಗಾವಿ, ಇದು ಚಿತ್ರದುರ್ಗ, ಸ್ವಾತಿ ಪ್ರಕಾಶನ, ಬೆಂಗಳೂರು, ೧೯೯೭.

೪೧. ಲಕ್ಷ್ಮಣ ತೆಲಗಾವಿ, ಚಿತ್ರದುರ್ಗದ ಪ್ರಾಚೀನ ನಾಮ ಮರುಪರಿಶೀಲನೆ, ಇತಿಹಾಸ ದರ್ಶನ, ಸಂಪುಟ–೧೨, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, ೧೯೯೭.

೪೨. ಲಕ್ಷ್ಮಣ ತೆಲಗಾವಿ, ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೪೩. ಲಕ್ಷ್ಮಣ ತೆಲಗಾವಿ, ಚರಿತ್ರೆ ಅಧ್ಯಯನ ಸಂಪುಟ–೧, ಸಂಚಿಕೆ–೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೪೪. ಲಕ್ಷ್ಮಣ ತೆಲಗಾವಿ, ಹರತಿ ಸಿರಿ, ಲಕ್ಷ್ಮೀ ಮುದ್ರಣ, ೭ನೇ ತಿರುವು, ೪ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು, ೧೯೮೭.

೪೫. ಲಕ್ಷ್ಮಣ ತೆಲಗಾವಿ, ಚಿತ್ರದುರ್ಗ ನಾಯಕ ಅರಸರು, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೦೯.

೪೬. ಲಕ್ಷ್ಮಣ ತೆಲಗಾವಿ, ೭೭ ಪಾಳೆಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೪೭. ಲಕ್ಷ್ಮಣ ತೆಲಗಾವಿ, ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೪೮. ವಸು ಎಂ.ವಿ., ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೪೯. ವಸು ಎಂ.ವಿ., ಮೌಖಿಕ ಚರಿತ್ರೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೪.

೫೦. ವಸಂತಲಕ್ಷ್ಮೀ ಕೆ., ಚಿತ್ರದುರ್ಗ ಜಿಲ್ಲೆಯ ಕಲ್ಯಾಣ ಚಾಲುಕ್ಯರ ದೇವಾಲಯಗಳು, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವಗಳು, ಗೋಪಾಲ ಆರ್. (ಸಂ)., ೨೦೦೫.

೫೧. ವೆಂಕಣ್ಣಚಾರ್ ಕೆ., ಹುಲ್ಲೂರು ಶ್ರೀನಿವಾಸ ಪಾಂಡುರಂಗ ಜೋಯಿಸರು, ಚಿತ್ರದುರ್ಗ ಮಾರ್ಗದರ್ಶಿ, ಪ್ರಸನ್ನ ಪ್ರಕಾಶನ, ಚಿತ್ರದುರ್ಗ, ೧೯೮೨.

೫೨. ವಿರೂಪಾಕ್ಷಿ ಪೂಜಾರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೫೩. ವಿರೂಪಾಕ್ಷಿ ಪೂಜಾರಹಳ್ಳಿ, ವಾಲ್ಮೀಕಿ ಸಮುದಾಯದ ಪ್ರಾರ್ಥ ಸ್ಮರಣೀಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೫೪. ವಿಠಲರಾವ್ ಗಾಯಕ್ವಾಡ್ (ಅನು.), ಲಜ್ಜಾಗೌರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೫೫. ವಿಶ್ವೇಶ್ವರಪ್ಪ, ಚಿತ್ರದುರ್ಗ ಜಿಲ್ಲೆಯ ಜನಪದ ಕಥೆಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೫.

೫೬. ವಿಶ್ವೇಶ್ವರಪ್ಪ ಜಿ., ಚಿತ್ರದುರ್ಗ ಜಿಲ್ಲೆಯ ಜನಪದ ಕಥೆಗಳು, ಶೃತಿ ಪ್ರಕಾಶನ, ಬೆಂಗಳೂರು, ೧೯೮೩.

೫೭. ವಿಜಯ್ ಪೂಣಚ್ಚ ತಂಬಂಡ, ಚರಿತ್ರೆ ಸಂಪುಟ ವಿಶ್ವಕೋಶ, Vol-IV, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೫೮. ವಿಜಯ್ ಪೂಣಚ್ಚ ತಂಬಂಡ, ಪಳಮೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೫೯. ವಿವೇಕ ರೈ ಬಿ.ಎ., ಅನ್ವಯಿಕ ಜಾನಪದ, ರಾಜೇಶ ಪವರ್ ಪ್ರೆಸ್, ಮಂಗಳಗಂಗೋತ್ರಿ, ೧೯೮೫.

೬೦. ವೆಂಕಟೇಶಯ್ಯ ಎಂ.ಜಿ., ಚಿತ್ರದುರ್ಗದ ಪಾಳೆಯಗಾರರು, ಶ್ರೀರಂಗನಿಧಿ ಮುದ್ರಣಾಲಯ, ಶ್ರೀರಂಗ ನಿಧಿ ಟ್ರಸ್ಟ್, ಶ್ರೀರಾಮಪುರಂ, ಬೆಂಗಳೂರು, ೧೯೭೧.

೬೧. ಶಂಕರ್ ಎಸ್. ಅಥಣಿ, ಹುಲ್ಲೂರು ಶ್ರೀನಿವಾಸ ಪಾಂಡುರಂಗ ಜೋಯಿಸರು, ಚಿತ್ರದುರ್ಗ ಏಳು ಸುತ್ತಿನ ಕೋಟೆ, ಜಯಭಾರತಿ ಪ್ರಕಾಶನ, ಚಿತ್ರದುರ್ಗ, ೧೯೮೮.

೬೨. ಶಂಕರ್ ಎಂ.ಎಸ್., ವೆಂಕಟೇಶಾಚಾರ್ ಕೆ., ಹುಲ್ಲೂರು ಶ್ರೀನಿವಾಸ ಪಾಂಡುರಂಗ ಜೋಯಿಸರು, ಚಿತ್ರದುರ್ಗ ಎ ಹ್ಯಾಂಡ್ ಬುಕ್, ೧೯೮೪.

೬೩. ಶರ್ಮಾ ತಿ.ತಾ., ಚಾರಿತ್ರಿಕ ದಾಖಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೧.

೬೪. ಶಿವತಾರಕ್ ಕೆ.ಬಿ., ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೬೫. ಶಾಮಶಾಸ್ತ್ರಿ ಆರ್. (ಸಂ.), ಲಿಂಗಣ್ಣ ಕವಿಯ ಕೆಳದಿ ನೃಪವಿಜಯಂ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೩

೬೬. ಶ್ರೀನಿವಾಸ ಎಂ.ವಿ., ಲಕ್ಷ್ಮಣ ತೆಲಗಾವಿ (ಸಂ.), ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನ ಮಂಡಳಿ, ೧೯೭೬.

೬೭. ಶ್ರೀಕಂಠಶಾಸ್ತ್ರೀ, ಕ್ಯಾಪಿಟಲೇಶನ್ ಆಫ್ ಚಿತ್ರದುರ್ಗ, Q.J.M.S. Vol-XVIII

೬೮. ಶ್ರೀಧರಮೂರ್ತಿ, ದೇವತೆಗಳು ಹಬ್ಬಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೧.

೬೯. ಶ್ರೀನಿವಾಸ ಬಿ.ಎಸ್., ಚಿತ್ರದುರ್ಗ ಕಾಮಗೇತಿ ಅರಸರು, ಪ್ರಶಾಂತಿ ಪ್ರಿಂಟರ್ಸ್, ದಾವಣಗೆರೆ, ೧೯೮೪.

೭೦. ಶ್ರೀಧರಮೂರ್ತಿ, ಚಿತ್ರದುರ್ಗ, ಗೌರಿ ಪ್ರಕಾಶನ, ಚಿತ್ರದುರ್ಗ, ೧೯೭೨.

೭೧. ಷೇಕ್ ಅಲಿ ಬಿ., ಟಿಪ್ಪುಸುಲ್ತಾನ ನ್ಯಾಷನಲ್ ಬುಕ್ ಟನ್ ಇಂಡಿಯಾ, ನವದೆಹಲಿ, ೧೯೭೯.

೭೨. ಸುಂದರ ಅ., ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ, ಐ.ಬಿ.ಹೆಚ್., ಬೆಂಗಳೂರು, ೧೯೭೩.

೭೩. ಸ್ವಾಮಿ ಜಿ.ಎಲ್., ಚಿತ್ರದುರ್ಗ ಡಿಸ್ಟ್ರಿಕ್ಟ್ ಕೈಫಿಡಿ, ಜಿಲ್ಲಾ ಆಡಳಿತ ಚಿತ್ರದುರ್ಗ, ಪ್ರಸನ್ನ ಪ್ರಕಾಶನ, ಚಿತ್ರದುರ್ಗ, ೧೯೮೨.

೭೪. ಸೂರ್ಯನಾಥ ಕಾಮತ್ ಮತ್ತು ದೇವರಕೊಂಡಾರೆಡ್ಡಿ, ಇತಿಹಾಸ ದರ್ಶನ, ಸಂಪುಟ ೮, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೭೫. ಸುಬ್ಬಣ್ಣ ರೈ ಬಿ.ಎ., ದಕ್ಷಿಣ ಕನ್ನಡ ಐತಿಹ್ಯಗಳು, ಮುಂಬೈ ವಿಶ್ವವಿದ್ಯಾಲಯ, ಮಾಣಿ ಜೂನಿಯರ್ ಚೇಂಬರ್, ಮಾಣಿ. ೧೯೯೩.

೭೬. ಸಾಲೆತೊರೆ ಆರ್.ಎಸ್., ವಿಜಯನಗರ ಆರ್ಟ್ಸ್, ೧೯೮೨.

೭೭. ಸ್ಲೇಟರ್ ಎ.ಆರ್., ದಿ ಹಿಲ್ ಫೋರ್ಟ್ಸ್ ಆಫ್ ಮೈಸೂರು, ದಿ ಮದರಾಸ್ ವೇಲ್ ಆ್ಯನುಯಲ್ ವ್ಹೀಲರ್ ಆರ್.ಇ.ಎಂ. ಬ್ರಹ್ಮಗಿರಿ ಆ್ಯಂಡ್ ಚಂದ್ರವಳ್ಳಿ, ಮೆಗಾಲಥಿಕ್ ಆ್ಯಂಡ್ ಅದರ್ ಕಲ್ಚರ್ ಇನ್ ದಿ ಚಿತ್ರದುರ್ಗ ಡಿಸ್ಟ್ರಿಕ್ಟ್, ಮೈಸೂರು ಸ್ಟೇಟ್, ಎ.ಎಲ್ ನಂ.೪, ೧೯೪೭–೪೮

೭೮. ಸೂರ್ಯನಾರಾಯಣರಾವ್ ಎ. ಹಿಸ್ಟರಿ ಆಫ್ ವಿಜಯನಗರ ವಿಷಿಯನ್ ಎಜುಕೇಶನಲ್ ಸರ್ವೀಸಸ್, ೧೯೩೩.

೭೯. ಹಿರೇಮಠ ಆರ್.ಸಿ. (ಸಂ.), ಕನಕದಾಸರ ಮೋಹನ ತರಂಗಿಣಿ, ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

೮೦. ಹುಲ್ಲೂರು ಶ್ರೀನಿವಾಸ ಪಾಂಡುರಂಗ ಜೋಯಿಸರು (ಸಂ.), ಚಿತ್ರದುರ್ಗದ ಬಖೈರು, ತಳುಕಿನ ವೆಂಕಣ್ಣ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೬೮.

೮೧. ಹುಲ್ಲೂರು ಶ್ರೀನಿವಾಸ ಪಾಂಡುರಂಗ ಜೋಯಿಸರು, ಗಂಡುಗಲಿ ಕುಮಾರರಾಮ, ಮಿಂಚಿನಬಳ್ಳಿ, ಧಾರವಾಡ, ೧೯೪೧.

**ಅಪ್ರಕಟಿತ ಗ್ರಂಥಗಳು**

೦೧. ಕೊಟ್ರೇಶ್ ಎಂ., ಕೋಟೆಕೊತ್ತಲಗಳು ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೦೨. ತಿಪ್ಪೇಸ್ವಾಮಿ ಎಂ.ಎಸ್., ರಕ್ಷಣಾ ವಾಸ್ತುಶಿಲ್ಪ : ಚಿತ್ರದುರ್ಗ ಜಿಲ್ಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೦೩. ಮಹಾಂತೇಶ್ ಎಸ್.ಎಸ್., ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೦೪. ಮುದ್ದವೀರಪ್ಪ ಕೆ.ವಿ., ಕೋಟೆ ಕೊತ್ತಲಗಳ ಜಾನಪದೀಯ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೦೫. ಶಕುಂತಲಾ ಎನ್., ಚಿತ್ರದುರ್ಗ ಪಾಳೆಯಗಾರರ ಕಲೆ ಮತ್ತು ವಾಸ್ತುಶಿಲ್ಪ : ಒಂದು ಅಧ್ಯಯನ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೦೬. ಸುಧಾ ಎ.ಸಿ., ಜನಪದ ಕಾವ್ಯಗಳಲ್ಲಿ ಬಲಿದಾನ : ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

**ನಿಯತಕಾಲಿಕೆಗಳು/ಪತ್ರಿಕೆಗಳು**

೦೧. ವಿಜಯ ಕರ್ನಾಟಕ ದಿನಪತ್ರಿಕೆ, ೧೯.೦೮.೨೦೧೦, ಸಂಚಿಕೆ-೨೮೮.

೦೨. ವಿಜಯ ಕರ್ನಾಟಕ ದಿನಪತ್ರಿಕೆ, ೧೨.೦೭.೨೦೧೦, ಸಂಚಿಕೆ-೨೮೬.

## ಪದಕೋಶ

| | | |
|---|---|---|
| ೦೧. ಅಂಬುಗಂಡಿ | – | ಬಾಣ, ಬಂದೂಕುಗಳನ್ನು ಪ್ರಯೋಗಿಸಲು ಮಾಡಿದ ಕೋಟೆ ಗೋಡೆಯಲ್ಲಿ ರಚಿಸಲಾದ ರಂಧ್ರ |
| ೦೨. ಅಗಸೆ | – | ಊರ ಹೆಬ್ಬಾಗಿಲು. |
| ೦೩. ಅಗಳು | – | ಕೋಟೆಯ ಸುತ್ತ ಅಗೆದ ತಗ್ಗು/ಕಂದಕ. |
| ೦೪. ಅಟ್ಟಾಲಕ | – | ಕೋಟೆಗೋಡೆಯ ಮೇಲೆ ಸ್ವಲ್ಪ ಎತ್ತರವಾಗಿ ನಿರ್ಮಿಸಿದ ವೇದಿಕೆ |
| ೦೫. ಆಳ್ವೇರಿ | – | ಕೋಟೆಗೋಡೆ. |
| ೦೬. ಇಳಿವೊರೆ | – | ಕೋಟೆಗೋಡೆಯ ಭದ್ರತೆಗಾಗಿ ಹಾಕಿರುವ ಮಣ್ಣಿನ ದಿಬ್ಬ. |
| ೦೭. ಕಣಜ | – | ಧಾನ್ಯ ಸಂಗ್ರಹಿಸುವ ಸ್ಥಳ. |
| ೦೮. ಇನಾಂ | – | ಬಹುಮಾನ. |
| ೦೯. ಇಷ್ಟಕದುರ್ಗ | – | ಇಟ್ಟಿಗೆಗಳಿಂದ ಕಟ್ಟಿ ಸುಣ್ಣ–ಬಣ್ಣ ಬಳಿದು ಅಗಲವಾದ ಮತ್ತು ಆಳವಾದ ಕಂದಕಗಳಿಂದ ಸುತ್ತುವರಿಯಲ್ಪಟ್ಟಿರುವ ಕೋಟೆ. |
| ೧೦. ಐರಿಣ | – | ಹಳ್ಳಿಗಳು, ಮುಳ್ಳು ಮತ್ತು ಕಲ್ಲುಗಳಿಂದ ಸುತ್ತುವರೆಯಲ್ಪಟ್ಟಿರುವುದು. |
| ೧೧. ಕಿಲ್ಲೆ | – | ಕೋಟೆ. |
| ೧೨. ಕೇತು | – | ಧ್ವಜ |
| ೧೩. ಕೋಷ್ಠಾಗಾರ | – | ಉಗ್ರಾಣದ ಕೊಠಡಿ |
| ೧೪. ಕೊತ್ತಳ | – | ಬುರುಜು |
| ೧೫. ಗಡ | – | ಕೋಟೆ |
| ೧೬. ಗಿರಿ | – | ನೀರಿಲ್ಲದ ನಿರ್ಜನ ಪ್ರದೇಶದಲ್ಲಿ ಎತ್ತರವಾದ ಗೋಡೆಗಳಿಂದ ಕಟ್ಟಿರುವುದು. |
| ೧೭. ಗಿರಿದುರ್ಗ | – | ಪರ್ವತದುರ್ಗ |
| ೧೮. ಗೆಗ್ಗೆ | – | ಕೋಟೆಯನ್ನು ಹತ್ತುವ ವಿಶೇಷ ಸಾಧನ. |
| ೧೯. ಗುಮ್ಮ | – | ಕೋಟೆ ಕಾಳಗದಲ್ಲಿ ಕೋಟೆಯ ಗೋಡೆಯನ್ನು ಒಡೆಯಲು ಉಪಯೋಗಿಸುತ್ತಿದ್ದ ಒಂದು ಯಂತ್ರ |

೨೦. ಗೊಂಟು – ಕೋಟೆಗೋಡೆಗಳು ಒಂದಕ್ಕೊಂದು ಸಂಧಿಸುವ ಸ್ಥಳ.

೨೧. ಗೋಲಿ – ಯುದ್ಧ

೨೨. ಚತುರಸ್ರ – ಚೌಕಾಕಾರ

೨೩. ಜಲದುರ್ಗ – ಎಲ್ಲ ಭಾಗಗಳಲ್ಲಿಯೂ ನೀರಿನಿಂದ ಸುತ್ತುವರೆಯಲ್ಪಟ್ಟಿರುವ ಕೋಟೆಗಳು

೨೪. ಝುಂಡಾ – ಬಾವುಟ

೨೫. ಠಾಣ್ಯ – ಸೈನ್ಯದ ಶಿಬಿರ

೨೬. ಡೇರೆ – ಗುಡಾರ, ಬಿಡಾರ

೨೭. ತಲವಾರ್ – ಕತ್ತಿ

೨೮. ತವಗ – ಕೋಟೆಯಲ್ಲಿ ಫಿರಂಗಿಯನ್ನಿಡಲು ಮಾಡಿದ ವಿಶೇಷ ಜಗುಲಿ

೨೯. ತಾಕೀತು – ಸೂಚನೆ

೩೦. ತುಕಡಿ – ಸೇನಾದಳ ವಿಭಾಗ

೩೧. ತೆನೆ – ಕೋಟೆಯ ಪ್ರಾಕಾರದ ತುದಿಯ ಗಾಲಿಯಾಕಾರದ ರಚನೆ

೩೨. ದರಬಾರು – ಕರಣಿಕರು

೩೩. ದಂಡು – ಸೇನೆ, ತುಕಡಿ

೩೪. ಧನ್ವ – ಒಣಭೂಮಿಯಲ್ಲಿದ್ದು ನೀರಿಲ್ಲದೆ ಕೇವಲ ಮಣ್ಣಿನಿಂದ ಆವರಿಸಲ್ಪಟ್ಟಿರುವುದು.

೩೫. ದರ್ವಾಜಿ – ಬಾಗಿಲು

೩೬. ದಾನವನ – ಮರುಭೂಮಿ ದುರ್ಗ

೩೭. ದಾರುಣಮಯ ದುರ್ಗ – ಮಠ ಮತ್ತು ಬುರುಜಗಳಿಂದ ನಿರ್ಮಿಸಿದ ಕೋಟೆ.

೩೮. ದೀರ್ಘಚತುಸ್ರ – ಆಯತಕಾರ

೩೯. ದಿವಾ಼ – ಪ್ರಧಾನಮಂತ್ರಿ

೪೦. ದಿಡ್ಡಿಬಾಗಿಲು – ಸಣ್ಣಬಾಗಿಲು

೪೧. ನರದುರ್ಗ – ಸುತ್ತಲೂ ಶಸ್ತ್ರಸಜ್ಜಿತವಾದ ಯೋಧರಿಂದ ರಕ್ಷಿತವಾಗಿರುವ ಕೋಟೆ.

೪೨. ನಿಷಾನಿ – ಗುರುತು, ಚಿಹ್ನೆ

೪೩. ಫರಿಘ – ಇಟ್ಟಿಗೆ ಕಲ್ಲು ಮತ್ತು ಮಣ್ಣುಗಳಿಂದ ತುಂಬಿದ ಹೊರಗೋಡೆಗಳು

೪೪. ಪರಿಖ – ಆಳವಾದ ಕಂದಕಗಳಿಂದ ಸುತ್ತುವರಿದಿರುವುದು.

೪೫. ಪಾಷಣದುರ್ಗ – ಬಂಡೆಗಳಿಂದ ರಚಿಸುವುದು.

೪೬. ಪಾಳೆಯ – ಬೀಡು, ಶಿಬಿರ

೪೭. ಪಾಳೆಯಗಾರ – ದಂಡಿನೊಡನೆ ಪಾಳೆಯವನ್ನು ಹಾಕಿ ಇಳಿದುಕೊಂಡು ಕದನಕ್ಕೆ ಸಿದ್ಧನಾಗಿರುವನು.

೪೮. ಫಿರಂಗಿ – ಗುಂಡು ಹಾರಿಸುವ ಬೃಹತ್ ಗಾತ್ರದ ತುಪಾಕಿ.

೪೯. ಫತೆದರ್ವಾರಜ – ಜಯದ ಬಾಗಿಲು

೫೦. ಪಟ – ಧ್ವಜ

೫೧. ಪ್ರಕಾರ – ಸುತ್ತಗೋಡೆ.

೫೨. ಪುಲುಮೊಗ – ಕೋಟೆಯ ಹೆಬ್ಬಾಗಿಲು

೫೩. ಪೌಜು – ಸೇನೆ.

೫೪. ಬತೇರಿ – ಕೋಟೆಯ ಮೇಲಿನ ತೋಪುಖಾನೆ

೫೫. ಬುರುಜು – ಕೋಟೆಯ ಪ್ರಕಾರದ ಮೇಲೂ ಗೋಪುರದ ತುದಿಯಲ್ಲಿ ಕಟ್ಟುವ ವರ್ತುಲಾಕಾರದ ಕಟ್ಟಡ.

೫೬. ಮರದುರ್ಗ – ಕೋಟೆಯೊಳಗೆ ಸಾಕಷ್ಟು ನೀರನ್ನು ಸಂಗ್ರಹಿಸಿ ಮರುಭೂಮಿಯಲ್ಲಿ ಕಟ್ಟಿರುವ ಕೋಟೆ.

೫೭. ಮೃತ್ತಿಕಾಮರಾಯನ್ – ಮಣ್ಣಿನಿಂದ ಕಟ್ಟಿರುವುದು.

೫೮. ಲಡಾಯಿ – ಯುದ್ಧ

೫೯. ವನ – ದಟ್ಟವಾದ ಅರಣ್ಯದಲ್ಲಿದ್ದು ಮುಳ್ಳು ಮರ ಪೊದೆಗಳಿದ ಆವೃತವಾಗಿರುವುದು.

೬೦. ವನದುರ್ಗ – ಅರಣ್ಯಕೋಟೆ.

೬೧. ವೃತ್ತ – ವರ್ತುಲಾಕಾರ.

| | | | |
|---|---|---|---|
| ೬೨. | ಸಹಾಯ | – | ಬಂಧುಗಳು ಮತ್ತು ಸ್ನೇಹಿತರ ಮನೆಗಳಿಂದ ರಕ್ಷಿಸಲ್ಪಟ್ಟಿರುವ ಆವರಣ |
| ೬೩. | ಸೈನ್ಯ | – | ಶಾಸ್ತ್ರಸನ್ನದ್ಧರಾದ ಸದೃಢವಾದ ಸೈನಿಕರಿಂದ ರಕ್ಷಿಸಲ್ಪಟ್ಟಿರುವ ಆವರಣ. |
| ೬೪. | ಹರಿಗೆ | – | ಗುರಾಣಿ |
| ೬೫. | ಹಗೇವು | – | ಧಾನ್ಯಗಳನ್ನು ತುಂಬಲು ನೆಲದಲ್ಲಿ ಮಾಡಿದ ಗುಳಿ |
| ೬೬. | ಹುಲಿಮೊಗ | – | ಕೋಟೆಯ ಹೆಬ್ಬಾಗಿಲು |
| ೬೭. | ಹುಡೇವು | – | ಕೊತ್ತಲ, ಬುರುಜು. |

## ವಕ್ತೃವಿವರ

೦೧. ಹೆಸರು : ಭಾಗ್ಯಮ್ಮ ಗಂಡ ತಿಪ್ಪೇಸ್ವಾಮಿ
ಊರು : ಕೋಡನಹಟ್ಟಿ, ಚಿತ್ರದುರ್ಗ
ವಯಸ್ಸು : ೬೦
ವೃತ್ತಿ ಮತ್ತು ಜಾತಿ: ಗೃಹಿಣಿ, ನಾಯಕ
ದಿನಾಂಕ : ೦೮.೦೪.೨೦೧೦.

೨. ಹೆಸರು : ನಾಗಮ್ಮ ಗಂಡ ರುದ್ರಪ್ಪ
ಊರು : ಕೋಡನಹಟ್ಟಿ, ಚಿತ್ರದುರ್ಗ
ವಯಸ್ಸು : ೩೫
ವೃತ್ತಿ ಮತ್ತು ಜಾತಿ: ಕೂಲಿ, ನಾಯಕ
ದಿನಾಂಕ : ೦೯.೦೪.೨೦೧೦.

೩. ಹೆಸರು : ಮಂಜಮ್ಮ ಗಂಡ ಶಿವಣ್ಣ
ಊರು : ಹನುಮನಗುಡಿ ಹತ್ತಿರ ಗುಯಿಲಹಾಳ್, ಹಿರಿಯೂರು ತಾಲ್ಲೂಕು
ಚಿತ್ರದುರ್ಗ ಜಿಲ್ಲೆ.
ವಯಸ್ಸು : ೪೪
ವೃತ್ತಿ ಮತ್ತು ಜಾತಿ: ಗೃಹಿಣಿ, ನಾಯಕ
ದಿನಾಂಕ : ೧೧.೦೪.೨೦೧೦.

೪. ಹೆಸರು : ನಾಗರಾಜ ತಂದೆ ಗುತ್ಯಪ್ಪ
ಊರು : ಈಚೇಲನಾಗೇನಹಳ್ಳಿ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
ವಯಸ್ಸು : ೩೮
ವೃತ್ತಿ ಮತ್ತು ಜಾತಿ: ಪೊಲೀಸ್ ಅಧಿಕಾರಿ, ಈಡಿಗರು.
ದಿನಾಂಕ : ೧೫.೦೪.೨೦೧೦.

೫. ಹೆಸರು : ಫಾತೀಮಾಬೀಬಿ ಗಂಡ ಹುಸೇನ್‌ಸಾಬ್
ಊರು : ಕೆಳಗೋಟೆ, ಚಿತ್ರದುರ್ಗ
ವಯಸ್ಸು : ೭೦
ವೃತ್ತಿ ಮತ್ತು ಜಾತಿ: ತರಕಾರಿ ವ್ಯಾಪಾರಿ, ಮುಸ್ಲಿಂ
ದಿನಾಂಕ : ೧೭.೦೪.೨೦೧೦.

೬. ಹೆಸರು : ರವಿಕುಮಾರ್ ತಂದೆ ಜಯ್ಯಣ್ಣ

ಊರು : ಚಿಕ್ಕಗೊಂಡನಹಳ್ಳಿ, ಚಿತ್ರದುರ್ಗ

ವಯಸ್ಸು : ೪೦

ವೃತ್ತಿ ಮತ್ತು ಜಾತಿ: ಅತಿಥಿ ಉಪನ್ಯಾಸಕರು, ಆದಿಕರ್ನಾಟಕ

ದಿನಾಂಕ : ೧೫.೦೪.೨೦೧೦.

೭. ಹೆಸರು : ರುದ್ರಪ್ಪ ತಂದೆ: ಸಣ್ಣವೀರಭದ್ರಪ್ಪ

ಊರು : ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

ವಯಸ್ಸು : ೫೨

ವೃತ್ತಿ ಮತ್ತು ಜಾತಿ: ವ್ಯಾಪಾರಿ, ಲಿಂಗಾಯತ

ದಿನಾಂಕ : ೧೮.೦೪.೨೦೧೦

೮. ಹೆಸರು : ಪಾರ್ವತಿ ಗಂಡ ಶಂಕರಪ್ಪ

ಊರು : ನಾಯಕನಹಟ್ಟಿ ಚಿತ್ರದುರ್ಗ.

ವಯಸ್ಸು : ೫೦

ವೃತ್ತಿ ಮತ್ತು ಜಾತಿ: ಗೃಹಣಿ, ಗೊಲ್ಲ.

ದಿನಾಂಕ : ೧೮.೦೪.೨೦೧೦

೯. ಹೆಸರು : ಮಾಹಬೂಬ್‌ಬಿ ಗಂಡ ಹುಸೇನಸಾಬ್

ಊರು : ಮಡದಹಟ್ಟಿ, ಚಿತ್ರದುರ್ಗ.

ವಯಸ್ಸು : ೮೨

ವೃತ್ತಿ ಮತ್ತು ಜಾತಿ: ಗೃಹಿಣಿ, ಮುಸ್ಲಿಂ

ದಿನಾಂಕ : ೨೦.೦೪.೨೦೧೦

೧೦. ಹೆಸರು : ಚಮನ್‌ಬಿ ಗಂಡ ಅಲಿಬ್‌ಸಾಬ್

ಊರು : ಮಡದಹಟ್ಟಿ, ಚಿತ್ರದುರ್ಗ.

ವಯಸ್ಸು : ೫೪

ವೃತ್ತಿ ಮತ್ತು ಜಾತಿ: ವ್ಯಾಪಾರಿ, ಮುಸ್ಲಿಂ

ದಿನಾಂಕ : ೨೦.೦೪.೨೦೧೦

೧೧. ಹೆಸರು : ಪ್ರಭಾವತಿ ಗಂಡ ಹನುಮಂತಪ್ಪ
ಊರು : ಕೋಡನಹಟ್ಟಿ, ಚಿತ್ರದುರ್ಗ
ವಯಸ್ಸು : ೫೫
ವೃತ್ತಿ ಮತ್ತು ಜಾತಿ: ಗೃಹಿಣಿ, ಆದಿದ್ರಾವಿಡ
ದಿನಾಂಕ : ೦೮.೦೪.೨೦೧೦

೧೨. ಹೆಸರು : ತಿಪ್ಪಮ್ಮ ಗಂಡ ವೀರಭದ್ರಪ್ಪ
ಊರು : ಮಡದಹಟ್ಟಿ ಚಿತ್ರದುರ್ಗ
ವಯಸ್ಸು : ೩೨
ವೃತ್ತಿ ಮತ್ತು ಜಾತಿ: ಗೃಹಿಣಿ, ನಾಯಕ
ದಿನಾಂಕ : ೨೦.೦೪.೨೦೧೦

# ಛಾಯಾಚಿತ್ರಗಳು



ಕೋಟೆಯ ಹೆಬ್ಬಾಗಿಲು



ಚಿತ್ರದುರ್ಗಕೋಟೆಯ ಒಂದುನೋಟ



ಹಿಡಿಂಬೇಶ್ವರ ದೇವಸ್ಥಾನದ ಹಾದಿ



ಗೋಪಾಲಸ್ವಾಮಿ ಹೊಂಡ



ಹಳೇ ಮುರುಘರಾಜೇಂದ್ರಮಠ



ಕೋಟೆಯೊಳಗಿನ ಮುರಘಮಠ



ಗರಡಿಮನೆ



ಕೋಟೆಯ 5ನೇ ಸುತ್ತಿನಲ್ಲಿ ಕಂಡು ಬರುವ ಮದ್ದುಬೀಸುವ ಕಲ್ಲು



ಕಾಮನಬಾವಿಯ ಒಂದುನೋಟ



ತುಪ್ಪದಕೊಳ ಆವರಣ

